# ಕೊರಗರಲ್ಲಿ ಶೈಕ್ಷಣಿಕ ಚಲನೆ; ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಒಂದು ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ

ಸಂಶೋಧನಾ ನಿಬಂಧ


ಸಂಶೋಧಕರು

ಶ್ರೀಮತಿ ಗೀತಾ ಭೀಮರಾವ್ ಅಫಜಲ್‌ಪೂರಕರ್

ಮಾರ್ಗದರ್ಶಕರು

ಡಾ.ವೈ. ರವೀಂದ್ರನಾಥ್ ರಾವ್

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,

ಸೈಂಟ್ ಮೇರಿಸ್ ಸಿರಿಯನ್ ಮಹಾವಿದ್ಯಾಲಯ

ಬ್ರಹ್ಮಾವರ–576213 (ಉಡುಪಿ ಜಿಲ್ಲೆ)



ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೊಠಡಿ,

ಮಂಗಳೂರು.

2011-2012

# ಕೊರಗರಲ್ಲಿ ಶೈಕ್ಷಣಿಕ ಚಲನೆ; ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಒಂದು ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ

ಸಂಶೋಧನಾ ನಿಬಂಧ


ಸಂಶೋಧಕರು

ಶ್ರೀಮತಿ ಗೀತಾ ಭೀಮರಾವ್ ಅಫಜಲ್‌ಪೂರಕರ್

ಮಾರ್ಗದರ್ಶಕರು

ಡಾ.ವೈ. ರವೀಂದ್ರನಾಥ್ ರಾವ್

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,

ಸೈಂಟ್ ಮೇರಿಸ್ ಸಿರಿಯನ್ ಮಹಾವಿದ್ಯಾಲಯ

ಬ್ರಹ್ಮಾವರ–576213 (ಉಡುಪಿ ಜಿಲ್ಲೆ)



ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೊಠಡಿ,

ಮಂಗಳೂರು.

2011

989

# ಅರ್ಹತಾ ಪತ್ರ

ಶ್ರೀಮತಿ ಗೀತಾ ಭೀಮರಾವ್ ಅಫಜಲ್‌ಪೂರಕರ್ ಇವರು "ಕೊರಗರಲ್ಲಿ ಶೈಕ್ಷಣಿಕ ಚಲನೆ," ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲೂಕಿನ ಒಂದು ಅಧ್ಯಯನ ಎಂಬ ಶೀರ್ಷಿಕೆಯ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೂಲಕ ರೂಪುಗೊಂಡಿದೆ. ಈ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಇವರು ಒಪ್ಪಿಸಿಲ್ಲ.

ದಿನಾಂಕ: 03-04-2012

ಸ್ಥಳ: ಬ್ರಹ್ಮಾವರ

ಮಾರ್ಗದರ್ಶಕರು

ಡಾ.ವೈ. ರವೀಂದ್ರನಾಥ್ ರಾವ್

ಪ್ರಾಧ್ಯಾಪಕರು

ಸೆಂಟ್ ಮೇರಿಸ್ ಸಿರಿಯನ್

ಮಹಾವಿದ್ಯಾಲಯ

ಬ್ರಹ್ಮಾವರ.

Dr. Y. Ravindranath Rao
M. A., Ph. D.,
Prof & Head Dept. of Sociology
St. Mary's Syrian College
BRAHMAVAR - 576 213 (D. K.)

# ಪ್ರಮಾಣಪತ್ರ

"ಕೊರಗರಲ್ಲಿ ಶೈಕ್ಷಣಿಕ ಚಲನೆ; ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಒಂದು ಅಧ್ಯಯನ", ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ, ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು ಡಾ.ವೈ. ರವೀಂದ್ರನಾಥ್ ರಾವ್, ಪ್ರಾಧ್ಯಾಪಕರು, ಸೇಂಟ್ ಮೇರಿಸ್ ಸಿರಿಯನ್ ಮಹಾವಿದ್ಯಾಲಯ, ಬ್ರಹ್ಮಾವರ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಪ್ರಬಂಧದ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಘೋಷಿಸುತ್ತೇನೆ.

ದಿನಾಂಕ : 03-04-2012

ಸ್ಥಳ : ಬೆಂಗಳೂರು

ಶ್ರೀಮತಿ ಗೀತಾ ಭೀಮರಾವ್ ಅಫಜಲ್‌ಪೂರಕರ್

# ವಿಷಯಾನುಕ್ರಮ

# ಕೋಷ್ಠಕಗಳ ಪಟ್ಟಿ

## ಭಾವಚಿತ್ರಗಳು

# ಅಧ್ಯಾಯ 1

## ಪೀಠಿಕೆ

ಆದಿವಾಸಿಗಳು ಭಾರತದ ಪ್ರಾಚೀನ ಜನಸಮುದಾಯವಾಗಿದೆ. ಇವರ ಪ್ರಾಚೀನತೆಯ ಬಗ್ಗೆ ನಡೆದ ಅಧ್ಯಯನದಿಂದ ಇವರು ಆರ್ಯನ್ನರಿಗಿಂತ ಮೊದಲಿನವರು ಎಂಬುದು ಗೊತ್ತಾಗುತ್ತದೆ. ಡಾ। ಬಿ.ಎಸ್.ಗುಹಾ ಅವರು ಭಾರತದ ಜನಾಂಗಗಳನ್ನು ಆರು ವರ್ಗಗಳಾಗಿ ವಿಂಗಡಿಸಿದ್ದಾರೆ. ಇದರಲ್ಲಿ ಮೂರು ಜನಾಂಗಗಳು ಭಾರತೀಯ ಮೂಲದವುಗಳು. ಕೊನೆಯ ಮೂರು ಜನಾಂಗಗಳು ಹೊರದೇಶಗಳಿಂದ ವಲಸೆ ಬಂದವರು. ಮೊದಲಿನ ಮೂರು ಜನಾಂಗಗಳೆಂದರೆ, ನಿಗ್ರಿಟೋಗಳು, ಪ್ರೋಟೋ– ಅಸ್ಟಲಾಯ್ಡರು ಮತ್ತು ಮಂಗೋಲಾಯ್ಡರು ಭಾರತದಲ್ಲಿ ಬುಡಕಟ್ಟು ಜನಾಂಗದವರು ಈ ಮೂರು ಜನಾಂಗಗಳಿಗೆ ಸೇರಿದವರಾಗಿದ್ದಾರೆ. ಭಾರತದ ಹೆಚ್ಚಿನ ಆದಿವಾಸಿಗಳು ಉತ್ತರದ ಈಶಾನ್ಯ ವಲಯಗಳಲ್ಲಿ ವಾಸಿಸುತ್ತಾರೆ. ಮತ್ತೆ ಬಂದ ಆರ್ಯನ್ನರು ಇವರನ್ನು ಯಾವುದೇ ಸಂಪರ್ಕವಿಲ್ಲದ ಕಡೆ ತಳ್ಳಿದರು. ಆದ್ದರಿಂದ ಹೆಚ್ಚಿನ ಆದಿವಾಸಿಗಳು ಕಾಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಶತಮಾನಗಳಿಂದ ವಾಸಿಸುತ್ತಿದ್ದಾರೆ.

ಪ್ರತಿಯೊಂದು ಆದಿವಾಸಿ ಸಮುದಾಯಕ್ಕೂ ತನ್ನದೇ ಆದ ನಿರ್ದಿಷ್ಟ ನೆಲೆ, ಸಾಮಾನ್ಯ ಹೆಸರು, ಸಾಮಾನ್ಯ ಭಾಷೆ, ಸಂಸ್ಕೃತಿ, ಸಾಮಾನ್ಯ ಧರ್ಮ, ಒಳಬಾಂಧವ್ಯದ ಘಟಕ ಮತ್ತು ಸಾಮಾನ್ಯವಾದ ರಾಜಕೀಯ ಸಂಘಟನೆಗಳಿವೆ ಆದಿವಾಸಿಗಳು ಸರಳ ಜೀವಿಗಳಾಗಿದ್ದು ಸೌಂದರ್ಯೋಪಾಸಕರಾಗಿದ್ದಾರೆ. ಇವರಿಗೆ ಇವರದ್ದೇ ಆದ ಪ್ರಾಚೀನ ಕುಲಕಸಬುಗಳಿವೆ. ಬೇಟೆಯಾಡುವದು, ಕಾಡುಗಳಲ್ಲಿ ವಸ್ತುಗಳನ್ನು ಸಂಗ್ರಹಿಸುವದು, ಬುಟ್ಟಿ ಹಣೆಯುವದು, ಜೇನುಹುಳು ಸಾಗಾಣಿಕೆ, ಪಶುಸಂಗೋಪನೆ ಇತ್ಯಾದಿ. ಅವುಗಳನ್ನು ಇವತ್ತಿಗೂ ಸಹ ಕೆಲವು ಆದಿವಾಸಿಗಳು ಮುಂದುವರೆಸಿಕೊಂಡು ಬಂದಿದ್ದಾರೆ. 1932ರ ಸೈಮನ್ ಆಯೋಗದಲ್ಲಿ ಬ್ರಿಟಿಷರು ಬುಡಕಟ್ಟು ಜನಾಂಗದವರನ್ನು ಪರಿಶಿಷ್ಟ ಪಂಗಡ ಎಂದು ಕರೆದರು. ಭಾರತ ಸ್ವತಂತ್ರ ಹೊಂದಿದ ಮೇಲೆ ಸಂವಿಧಾನದಲ್ಲಿಯೂ ಅವರನ್ನು ಪರಿಶಿಷ್ಟ ಪಂಗಡ ಎಂದು ಸಂಭೋದಿಸಲಾಗಿದೆ.

ಭಾರತದ ಒಟ್ಟು ಜನಸಂಖ್ಯೆಯಲ್ಲಿ ಆದಿವಾಸಿಗಳ ಸಂಖ್ಯೆಯು 1981ರ ಜನಗಣತಿಯ ಪ್ರಕಾರ 5.16ಕೋಟಿ ಅಂದರೆ ಶೇಕಡಾ 7, ಇದರಲ್ಲಿ 2.60 ಕೋಟಿ ಗಂಡು ಮತ್ತು 2.56 ಕೋಟಿ ಹೆಣ್ಣು ಮಕ್ಕಳು. 1991ರ ಗಣತಿಯ ಪ್ರಕಾರ 7.42 ಕೋಟಿ ಇದು ಭಾರತದ ಜನಸಂಖ್ಯೆಯ ಶೇಕಡಾ 8.8 ಭಾರತವು ಅತ್ಯಂತ ಹೆಚ್ಚು ಆದಿವಾಸಿಗಳನ್ನೊಳಗೊಂಡ ದ್ವಿತೀಯ ದೇಶವಾಗಿದೆ. ಆಫ್ರಿಕಾ ಮೊದಲನೆಯ ಸ್ಥಾನದಲ್ಲಿದೆ. ಭಾರತದಲ್ಲಿ ಐದು ಸಾವಿರಕ್ಕೂ ಮೀರಿದ ಬುಡಕಟ್ಟು ಜನಾಂಗಗಳಿವೆ.

**ಭೌಗೋಳಿಕ ಹಂಚಿಕೆ:**

ಭೌಗೋಳಿಕ ಹಾಗೂ ಸಾಂಸ್ಕೃತಿಕ ಅಂಶಗಳ ಆಧಾರದ ಮೇಲೆ ಭಾರತದ ಪರಿಶಿಷ್ಟ ಪಂಗಡಗಳನ್ನು ಮೂರು ವಲಯಗಳಲ್ಲಿ ವಿಂಗಡಿಸಲಾಗಿದೆ.

1. ದಕ್ಷಿಣ ವಲಯ
2. ಮಧ್ಯ ವಲಯ
3. ಈಶಾನ್ಯ ವಲಯ

1. **ದಕ್ಷಿಣ ವಲಯ:** ಈ ವಲಯಕ್ಕೆ ತೋಡ, ಸೋಲಿಗ, ಇರುಳ, ಚಂಚು, ಕೋಟಾ, ಉರುಳಿ, ಇರುಳಿಗ, ಜೇನು ಕುರುಬ, ಕಾಡಾರೆ, ಆಡಯನ್ ಮೊದಲಾದ ದಕ್ಷಿಣ ಭಾರತದ ಆದಿವಾಸಿಗಳು ಸೇರುತ್ತಾರೆ.
2. **ಮಧ್ಯವಲಯ:** ಈ ವಲಯಕ್ಕೆ ಸಂತಾಲ್, ಭಿಲ್, ಹೋ, ಮುಂಡಾ, ಖೋಂಡ್, ಬೈಗಾ, ಅಗೇರಿಯಾ, ನವ್ರೋದ್, ಒರಿಯನ್, ಭೂಮಿಯಾ, ಬಿರ್‌ಹಾರ್, ಗೊಂಡ್, ಖರಿಯಾ, ಕೋಲ್ ಮೊದಲಾದ ಆದಿವಾಸಿ ಜನಾಂಗಗಳು ಮಧ್ಯವಲಯದಲ್ಲಿ ಬರುತ್ತವೆ.
3. **ಈಶಾನ್ಯ ವಲಯ:** ಈ ವಲಯದಲ್ಲಿ ನಾಗಾ, ಥಾಂಗ್, ಯಚುಮಿ, ತೊಕೋಮಿ, ಅಖಾನ್, ಡಫ್ಲಾನ್, ಮಿರಿಸ್, ಅಬೋರ್, ಮಿಶ್ಮಿನ್, ಕುಕೀನ್ ಮೊದಲಾದವರು ಈಶಾನ್ಯ ವಲಯಕ್ಕೆ ಸೇರುತ್ತಾರೆ.

ನಿರ್ಮಲ್ ಕುಮಾರ್ ಬೋಸ್ ಅವರು ಭಾರತದ ಆದಿವಾಸಿಗಳನ್ನು ವೃತ್ತಿಗೆ ಅನುಗುಣವಾಗಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಿದ್ದಾರೆ.

1. ಬೇಟೆಗಾರರು, ಮೀನುಗಾರರು ಮತ್ತು ಆಹಾರ ಸಂಗ್ರಹಕಾರರು
2. ಸ್ಥಳಾಂತರ ಬೇಸಾಯಗಾರರು
3. ರೈತರು, ವಿವಿಧ ಕಸುಬಿನವರು
4. ಅಲೆಮಾರಿ ಬುಡಕಟ್ಟುಗಳು.

**ಆದಿವಾಸಿ ಪರಿಕಲ್ಪನೆ:**

**ಡಬ್ಲ್ಯೂ. ಹೆಚ್. ಆರ್. ರೀವರ್ಸ್:** "ಆದಿವಾಸಿಗಳು ಒಂದು ಸರಳ ಜನಾಂಗದ ಸದಸ್ಯರಾಗಿರುತ್ತಾರೆ. ಸಾಮಾನ್ಯವಾಗಿ ಒಂದೇ ಭಾಷೆಯನ್ನಾಡುತ್ತಾರೆ. ಒಂದೇ ಸಮಾಜವನ್ನು ರಚಿಸಿಕೊಂಡಿರುತ್ತಾರೆ. ಯುದ್ಧ ಮೊದಲಾದ ಸಂದಿಗ್ಧ ಪರಿಸ್ಥಿತಿಯಲ್ಲಿ ಎಲ್ಲರೂ ಒಗ್ಗೂಡುತ್ತಾರೆ." ಎಂದು ಹೇಳಿದ್ದಾರೆ.

**ಡಾ।ಡಿ.ಎನ್. ಮಜುಮ್‌ದಾರ್** –"ಒಂದೇ ನಾಮಾಂಕಿತವನ್ನು ಹೊಂದಿರುವ, ಒಂದೇ ಭೂನೆಲೆಯಲ್ಲಿ ವಾಸಿಸುವ, ಒಂದೇ ಭಾಷೆಯನ್ನಾಡುವ ಮತ್ತು ವಿವಾಹ, ಉದ್ಯೋಗಗಳಿಗೆ ಸಂಬಂಧಿಸಿದಂತೆ ಒಂದೇ ಬಗೆಯ ವಿಧಿ ನಿಷೇಧಗಳಿಗೆ ಬದ್ಧವಾದ ಕುಟುಂಬಗಳ ಸಮೂಹವನ್ನು ಆದಿವಾಸಿ ಸಮೂಹ ಎಂದು ಕರೆಯುತ್ತೇವೆ." ಎಂದು ಹೇಳಿದ್ದಾರೆ.

**ಎಸ್. ಸಿ.ದುಬೆ** :ಅವರ ಪ್ರಕಾರ, "ಆದಿವಾಸಿ ಸಮೂಹವು ವಿಶಾಲ ವ್ಯಾಪ್ತಿಯ ಸಾಂಸ್ಕೃತಿಕ ಲಕ್ಷಣಗಳನ್ನು ಸಾಮಾನ್ಯವಾಗಿ ಹಂಚಿಕೊಂಡಿರುವ ವಾಸ್ತವಿಕವಾಗಿ ಇಲ್ಲವೇ ವಾಸ್ತವಿಕವೆಂದು ಪ್ರತೀತಿ ಇರುವ

ವಂಶಾವಳಿಯನ್ನು ಹೊಂದಿದ ಮತ್ತು ಸಾಮೂಹಿಕ ಸ್ವರೂಪವನ್ನು ಹೊಂದಿರುವ ಜನಾಂಗೀಯ ಇಲ್ಲವೇ ಮಾನವ ಬುಡಕಟ್ಟಾಗಿದೆ."

ಭಾರತದಲ್ಲಿ ಬ್ರಿಟೀಷರ ಆಳ್ವಿಕೆಗಿಂತ ಮೊದಲು ಆದಿವಾಸಿಗಳ ಸ್ವತಂತ್ರಕ್ಕೆ ಯಾವುದೇ ಧಕ್ಕೆ ಉಂಟಾಗಿರಲಿಲ್ಲ. ಬ್ರಿಟಿಷರು ದೇಶವನ್ನು ರಾಜಕೀಯವಾಗಿ ಆಳಲು ಪ್ರಾರಂಭಿಸಿದಾಗ ಏಕ ರೀತಿಯ ಆಳ್ವಿಕೆ ಜಾರಿಗೆ ಬಂತು. 19ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಾದ ಕೈಗಾರಿಕಾ ಕ್ರಾಂತಿಯಿಂದ ಭಾರತದಲ್ಲಿ ಅನೇಕ ಬದಲಾವಣೆಗಳಾದವು. ಕಾಡುಗಳು ನಾಶವಾಗತೊಡಗಿದವು. ಆದ್ದರಿಂದ ಬುಡಕಟ್ಟು ಜನರು ಕಾಡುಗಳನ್ನು ಬಿಟ್ಟು ನಾಗರಿಕ ಜನರ ಸಂಪರ್ಕಕ್ಕೆ ಬರಬೇಕಾಯಿತು. ಅನೇಕ ಕ್ರೈಸ್ತ ಮತ ಪ್ರಚಾರಕರು ಆದಿವಾಸಿಗಳನ್ನು ತಮ್ಮ ಧರ್ಮಕ್ಕೆ ಮತಾಂತರಗೊಳಿಸಲು ಪ್ರಯತ್ನಿಸಿದರು. ಇವರು ತಮ್ಮ ಭೂಮಿ, ಮನೆ ಕಳೆದುಕೊಂಡು ಕೂಲಿ ಕೆಲಸಗಳನ್ನು ಮಾಡಿಕೊಂಡು ಜೀವನ ನಡೆಸತೊಡಗಿದರು.

ಸ್ವಾತಂತ್ರ್ಯ ನಂತರ ಭಾರತದಲ್ಲಿ ಇವರ ಪರಿಸ್ಥಿತಿ ತೀವ್ರಗತಿಯಲ್ಲಿ ಬದಲಾವಣೆಯಾಯಿತು. ತಮ್ಮ ಭೂಮಿ ಪರಕೀಯರ ವಶವಾಗಿದೆ ಎಂದು ಭಾವಿಸಿದ್ದ ಈ ಜನಾಂಗಕ್ಕೆ ಭಾರತ ಸರಕಾರ ಹೆಚ್ಚು ಬುಡಕಟ್ಟು ಜನಾಂಗಗಳಿರುವ ಪ್ರದೇಶಗಳನ್ನು ಪ್ರತ್ಯೇಕ ರಾಜ್ಯಗಳಾಗಿ ರೂಪಿಸಿ ಅವುಗಳಿಗೆ ಹೆಚ್ಚಿನ ಅನುಕೂಲತೆಗಳನ್ನು ಒದಗಿಸಿದೆ. ಉದಾ: ನಾಗಾಲ್ಯಾಂಡ್, ಮಣಿಪುರ, ತ್ರಿಪುರ, ಅರುಣಾಚಲ ಪ್ರದೇಶ ಇತ್ಯಾದಿ.

ಭಾರತದ ಕೆಲವು ಸಮಸ್ಯೆಗಳಲ್ಲಿ ಬುಡಕಟ್ಟು ಜನಾಂಗಗಳ ಸಮಸ್ಯೆಯೂ ಒಂದಾಗಿದೆ. ಇವರು ತಮ್ಮ ಮೊದಲಿನ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕೆ? ಅಥವಾ ಹಿಂದು ಧರ್ಮದಲ್ಲಿ ವಿಲೀನವಾಗಬೇಕೆ? ಎಂಬುದು ಮತ್ತೊಂದು ಸಮಸ್ಯೆ. ಆದಿವಾಸಿಗಳು ಅತ್ಯಂತ ಹೀನಾಯವಾದ ಜೀವನವನ್ನು ನಡೆಸುತ್ತಿದ್ದಾರೆ. ಅದಕ್ಕಾಗಿ ಇವರನ್ನು ಜಿ.ಎಸ್. ಘುರ್ರೆ 'ಹಿಂದುಳಿದ ಹಿಂದು'ಗಳೆಂದು ಸರ್ ಬೈನ್ಸ್ 'ಹಿಲ್ ಟ್ರೈಬ್ಸ್' ಎಂದು, ಡಾ। ಹಟ್ಟನ್ 'ಪ್ರಿಮಿಟವ್ ಟ್ರೈಬ್ಸ್' ಎಂದು ಮತ್ತು ಠಕ್ಕರ್ ಬಾಪಾ 'ಆದಿ ಪ್ರಜಾ' ಎಂದು ಕರೆದಿದ್ದಾರೆ.

**ಬುಡಕಟ್ಟುಗಳ ಕಲ್ಯಾಣ ಕಾರ್ಯಕ್ರಮಗಳು ಮತ್ತು ಯೋಜನೆಗಳು:**

ಭಾರತ ಸ್ವತಂತ್ರದ ನಂತರ ಪರಿಶಿಷ್ಟ ಜನಾಂಗಗಳಿಗೆ ರಕ್ಷಣೆ ಜೊತೆಗೆ ಸಾಮಾಜಿಕ ನ್ಯಾಯ ದೊರಕಿಸಲು ಅನೇಕ ಕ್ರಮಗಳನ್ನು ಕೈಗೊಂಡಿದೆ.

a. ಸಂವಿಧಾನದ 15ನೇ ಕಲಮಿನ ಪ್ರಕಾರ ವ್ಯಕ್ತಿಗಳನ್ನು ಲಿಂಗ, ಜಾತಿ, ಜನಾಂಗ, ಹುಟ್ಟು ಇವುಗಳ ಆಧಾರದ ಮೇಲೆ ಭೇದ ಕಲ್ಪಿಸುವಂತಿಲ್ಲ.

b. ಸಂವಿಧಾನದ 17ನೇ ಹಾಗೂ 335ನೇ ಕಲಮಿನ ಪ್ರಕಾರ ಈ ಸಮುದಾಯಗಳಿಗೆ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿಯನ್ನು ಕಲ್ಪಿಸುವಂತೆ ರಾಜ್ಯಗಳಿಗೆ ನಿರ್ದೇಶನ ನೀಡಲಾಗಿದೆ.

c. ಸಂವಿಧಾನದ 19(5) ನೇ ಕಲಮಿನ ಪ್ರಕಾರ ಸಮಾಜದ ಇತರರಂತೆ ಪರಿಶಿಷ್ಟ ವರ್ಗದವರು ದೇಶದ ಯಾವುದೇ ಭಾಗದಲ್ಲಿ ಆಸ್ತಿ ಮಾಡುವ ಹಕ್ಕನ್ನು ಪಡೆದಿದ್ದಾರೆ.

d. ಸಂವಿಧಾನದ 330, 332 ಹಾಗೂ 334ನೇ ಕಲಮಿನ ಪ್ರಕಾರ ಲೋಕಸಭೆ ಹಾಗೂ ರಾಜ್ಯ ವಿಧಾನ ಸಭೆಗಳಲ್ಲಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳಿಗೆ ಸ್ಥಾನಗಳನ್ನು ಮೀಸಲಿಡಲಾಗಿದೆ.

**ಕರ್ನಾಟಕದಲ್ಲಿ ಆದಿವಾಸಿಗಳು:**

ಆದಿವಾಸಿ ಸಮುದಾಯಗಳು ನಮ್ಮ ಪ್ರಾಚೀನತೆಯ ಕುರುಹುಗಳಾಗಿವೆ. ಇವುಗಳು ತಮ್ಮದೇ ಆದ ಸಂಸ್ಕೃತಿಯ ಹಿನ್ನಲೆ ವಿಚಾರಗಳನ್ನು ಒಳಗೊಂಡಿವೆ. ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಬುಡಕಟ್ಟು ಜನಾಂಗಗಳು ವಾಸಿಸುತ್ತಿದ್ದು, ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಅವುಗಳಲ್ಲಿ ಸುಮಾರು 50ರಷ್ಟು ಸಮುದಾಯಗಳು ಕರ್ನಾಟಕದಲ್ಲಿ ವಾಸಿಸುತ್ತವೆ. ಎಲ್ಲ ಬುಡಕಟ್ಟುಗಳಿಗೆ ಶೈಕ್ಷಣಿಕ ಸೌಲಭ್ಯ, ಆರ್ಥಿಕ ನೆರವು ಮತ್ತು ಭೂಮಿಯನ್ನು ನೀಡಬೇಕು.

ಕರ್ನಾಟದ 50 ಬುಡಕಟ್ಟುಗಳಲ್ಲಿ ಕೆಲವು ಬುಡಕಟ್ಟುಗಳ ಹೆಸರುಗಳು ಈ ಕೆಳಗಿನಂತಿವೆ.

ಅಡಿಯನ್, ಬಾರ್ಡಾ, ಬಾವಚಾ, ಭಿಲ್, ಚೆಂಚು, ಚೋಧರಾ, ಗೊಂಡ್, ಗೌಡಲು, ಹಕ್ಕಿಪಕ್ಕಿ, ಹಸಲರು, ಇರುಳಿಗ, ಜೇನು ಕುರುಬ, ಕಾಡು ಕುರುಬ, ಕೋಳಿ ಢೋರ್, ಕೊರಗ, ಕೋಟ, ಕುರುಬ, ಮಲೇರು, ಮರಾಠಾ, ಮರಾಟಿ,ನಾಯಕ ಬೇಡ, ಸೋಲಿಗರು, ತೋಡ, ಸಿದ್ಧಿಯರು ಮೊದಲಾದವರು.

1991ರ ಜನಗಣತಿಯ ಪ್ರಕಾರ, ಕರ್ನಾಟಕದಲ್ಲಿ ಶೇಕಡಾ 8.8ರಷ್ಟು ಆದಿವಾಸಿಗಳು ವಾಸಿಸುತ್ತಿದ್ದಾರೆ. ಇವರ ಒಟ್ಟು ಸಂಖ್ಯೆ 19,15691 ರಷ್ಟಿತ್ತು. 1961-81ರ ಅವಧಿಯಲ್ಲಿ ಆದಿವಾಸಿಗಳ ಸಂಖ್ಯೆ ಕರ್ನಾಟಕದಲ್ಲಿ ಹೆಚ್ಚಾಗಿದೆ. 1981ರಂತೆ ಇಡೀ ದೇಶದಲ್ಲಿ ಕರ್ನಾಟಕ ಒಂಬತ್ತನೇ ಸ್ಥಾನದಲ್ಲಿದೆ.

ಕರ್ನಾಟಕದ ಬುಡಕಟ್ಟು ಜನಾಂಗದವರು ವಿವಿಧ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ಬಳ್ಳಾರಿ, ಚಿತ್ರದುರ್ಗ, ಕೊಡಗು, ಕೋಲಾರ, ತುಮಕೂರು ಈ ಜಿಲ್ಲೆಗಳಲ್ಲಿ ಶೇಕಡಾ ೪ರಿಂದ 14 ರಷ್ಟು ಜನಸಂಖ್ಯೆ ಇದೆ. ಬೆಂಗಳೂರು, ಬೆಳಗಾವಿ, ಬೀದರ್, ಬಿಜಾಪುರ, ಚಿಕ್ಕಮಂಗಳೂರು, ದಕ್ಷಿಣ ಕನ್ನಡ, ಧಾರವಾಡ, ಗುಲ್ಬರ್ಗ, ಶಿವಮೊಗ್ಗ, ಉಡುಪಿ ಜಿಲ್ಲೆಗಳಲ್ಲಿ ಅಂದರೆ ಶೇಕಡಾ 1ರಿಂದ 4ರಷ್ಟಿದ್ದಾರೆ. ಉತ್ತರ ಕನ್ನಡ, ಮಂಡ್ಯ ಮತ್ತು ಹಾಸನದಲ್ಲಿ ತುಂಬಾ ಕಡಿಮೆ ಅಂದರೆ ಶೇಕಡಾ 1ರಷ್ಟು ಇರುವುದನ್ನು ಕಾಣಬಹುದು.

ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟು ಜನಾಂಗಗಳಲ್ಲಿ ನಾಯ್ಕಡ್ ಶೇ.69, ಕಾಡು ಕುರುಬರು ಶೇ11, ಮರಾಟಿ ಶೇ4, ಗೊಂಡರು ಶೇ3, ಕೋಲಿಡರ್ ಶೇ2, ಜೇನುಕುರುಬ ಶೇ2, ಸೋಲಿಗರು ಮತ್ತು ಕೊರಗರು ಶೇ1, ಇವರಲ್ಲಿ ಹೆಚ್ಚಿನ ಆದಿವಾಸಿಗಳು ಹಳ್ಳಿಗಳಲ್ಲಿ ಮತ್ತು ಬೆಟ್ಟ ಗುಡ್ಡಗಳಲ್ಲಿ ವಾಸವಾಗಿದ್ದಾರೆ. ಶೇ15 ರಷ್ಟು ಜನಸಂಖ್ಯೆ ಮಾತ್ರ ಪಟ್ಟಣಗಳಲ್ಲಿ ವಾಸವಾಗಿದೆ.

**ದಕ್ಷಿಣ ಕನ್ನಡ ಜಿಲ್ಲೆ:**

ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಆದಿವಾಸಿಗಳನ್ನು ಕಾಣಬಹುದು. ಅತೀ ಹೆಚ್ಚಿನ ಸಂಖ್ಯೆಯಲ್ಲಿ ಸುಳ್ಯ ತಾಲೂಕಿನಲ್ಲಿ ಶೇ 8.78, ಪುತ್ತೂರಿನಲ್ಲಿ ಶೇ 6.23, ಬೆಳ್ತಂಗಡಿಯಲ್ಲಿ ಶೇ.5.93, ಬಂಟ್ವಾಳದಲ್ಲಿ ಶೇ.5.33, ಮಂಗಳೂರು ತಾಲೂಕಿನಲ್ಲಿ ಅತ್ಯಂತ ಕಡಿಮೆಯೆಂದರೆ, ಶೇ. 0.80ರಷ್ಟಿದ್ದಾರೆ. ಮಂಗಳೂರು ಪರಿಸರದ ದೇರೆಬೈಲು, ಕೋಡಿಕಲ್ಲು, ಕುದ್ರೋಡಿಗುಡ್ಡೆ, ಮರವೂರು, ಬಜಪೆ, ಬೈಕಂಪಾಡಿ, ಹಳೆಯಂಗಡಿ, ಮುಲ್ಕಿ, ಕಿನ್ನಿಗೋಳಿ, ಮಿಜಾರು, ಪಂಜ, ಮಧ್ಯ, ಸೂರಿಂಜೆ, ಕೃಷ್ಣಾಪುರ, ಮೊದಲಾದ ಕಡೆಗಳಲ್ಲಿ ಕೊರಗರು ಗುಂಪು, ಗುಂಪಾಗಿ ವಾಸಿಸುತ್ತಿದ್ದಾರೆ.

ಕೊರಗರು ದಕ್ಷಿಣ ಕನ್ನಡ ಜಿಲ್ಲೆಯ ಅತ್ಯಂತ ಪ್ರಾಚೀನ ಬುಡಕಟ್ಟು ಜನಾಂಗವಾಗಿದೆ. 1956ರಲ್ಲಿ ರಾಷ್ಟ್ರಪತಿಗಳ ಅದೇಶದ ಮೇರೆಗೆ ಇವರನ್ನು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರಿಸಲಾಗಿದೆ. ಹೀಗೆ ಘೋಷಣೆಯಾದ ನಂತರವೂ ಇವರು ಜೀತ ಪದ್ಧತಿ, ಅಜಲು ಪದ್ಧತಿ ಮತ್ತು ಬಡತನದಿಂದ ಹೊರಗೆ ಬರಲು ಸಾಧ್ಯವಾಗುತ್ತಿಲ್ಲ. ಇವರನ್ನು ಹಿಂದೂ ಸಮಾಜದಲ್ಲಿ ಅಶುದ್ಧ ಮತ್ತು ಅತ್ಯಂತ ಹಿಂದುಳಿದ ಜನಾಂಗವೆಂದು ಪರಿಗಣಿಸಲಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತ್ಯಂತ ಘೋರವಾದ ಬಡತನ, ಹಸಿವು, ಅಸ್ಪೃಶ್ಯತೆ, ಶೋಷಣೆಯನ್ನು ಅನುಭವಿಸಿ, ಸಾಮಾಜಿಕ ದಾಸ್ಯಕ್ಕೆ ತಳ್ಳಲ್ಪಟ್ಟ ಕುಲವೆಂದರೆ, ಕೊರಗರು ಮಾತ್ರ. ಇವರನ್ನು ಪಂಚಮರಲ್ಲಿ ಪಂಚಮರು, ಅಸ್ಪೃಶ್ಯರಲ್ಲಿ ಅಸ್ಪೃಶ್ಯರು ಮತ್ತು ಜಾತಿ ವ್ಯವಸ್ಥೆಯಲ್ಲಿ ಅಂತ್ಯಜರು ಎಂದು ಪರಿಗಣಿಸಲಾಗುತ್ತದೆ. ಕೊರಗರು ಅನೇಕ ಸಮಸ್ಯೆಗಳ ಸುಳಿಯಲ್ಲಿ ಜೀವನ ನಡೆಸುತ್ತಿದ್ದಾರೆ. ಇದಕ್ಕೆಲ್ಲ ಮುಖ್ಯ ಕಾರಣ ಅವರ ಕನಿಷ್ಠ ಶಿಕ್ಷಣ ಮಟ್ಟ. ಶಿಕ್ಷಣದ ಮೂಲಕ ಮಾತ್ರ ಕೊರಗ ಜನಾಂಗದಲ್ಲಿ ಅರಿವಿನ ಕೊರತೆಯನ್ನು ನೀಗಿಸುವುದರ ಜೊತೆಗೆ ವೈಚಾರಿಕತೆಯನ್ನು ಹುಟ್ಟು ಹಾಕಿ ಅವರನ್ನು ಮುಖ್ಯವಾಹಿನಿಗೆ ಕರೆದೊಯ್ಯಬಹುದಾಗಿದೆ. ಆದ್ದರಿಂದ ಕೊರಗ ಜನಾಂಗದಲ್ಲಿ ಶೈಕ್ಷಣಿಕ ಚಲನೆಗೆ ಸಂಬಂದಿಸಿದ ವಿಷಯದಲ್ಲಿ ಹೆಚ್ಚಿನ ಅಧ್ಯಯನ ಅಗತ್ಯವಾಗಿದೆ. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಕೊರಗ ಸಮುದಾಯದಲ್ಲಿನ ಶೈಕ್ಷಣಿಕ ಚಲನೆಯನ್ನು ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ.

**ಕೊರಗರಲ್ಲಿ ಶೈಕ್ಷಣಿಕ ಚಲನೆ:**

ಶಿಕ್ಷಣವು ವಿಶಾಲವಾದ ಅರ್ಥವನ್ನು ಹೊಂದಿದೆ– ಜೀವನದ ಅರ್ಥ ಬಹುತೇಕ ಬಿಂಬಿಸಲ್ಪಡುವುದು ಶಿಕ್ಷಣದಿಂದ ಇದು ವ್ಯಕ್ತಿಗೆ ಮತ್ತು ಸಮಾಜಕ್ಕೆ ಮೂರ್ತರೂಪವನ್ನು ನೀಡುವುದು. ಇಂದು ಮಗು ಮನುಷ್ಯನಾಗಿ, ವ್ಯಕ್ತಿಯಾಗಿ, ಶಕ್ತಿಯಾಗಿ ಬೆಳೆಯುವಲ್ಲಿ ಶಿಕ್ಷಣದ ಪಾತ್ರ ಹಿರಿದು. ಲ್ಯಾಟಿನ್ ಭಾಷೆಯ "ಎಜುಕೇರ್" ಎಂಬ ಪದದ ಅರ್ಥ "ಮೇಲಕ್ಕೆ ತರು", ಹುದುಗಿರುವ ಅದೃಷ್ಟ ಶಕ್ತಿಯನ್ನು ಮೇಲಕ್ಕೆತ್ತು ಎಂಬ ಅರ್ಥ ಬರುವಂತೆ "ಎಜುಕೇಶನ್" ಎಂಬ ಆಂಗ್ಲ ಪದ ರೂಪವನ್ನು ಪಡೆದಿದೆ. ಪ್ರತೀ ಮಗು ಒಂದಲ್ಲ

ಒಂದು ರೀತಿಯಲ್ಲಿ ಭಿನ್ನವಾಗಿದ್ದು, ಭಿನ್ನವಾದ ಆಂತರಿಕ ಶಕ್ತಿಯನ್ನು ಹೊಂದಿರುತ್ತದೆ. ಈ ಭಿನ್ನತೆಗೆ ಅನುಗುಣವಾಗಿ ಅದಕ್ಕೆ ಸಂಸ್ಕಾರ ರೂಪವನ್ನು ನೀಡುವುದೇ ಶಿಕ್ಷಣ. ಇದು ಪ್ರತೀ ಮಗುವಿನಲ್ಲಿರುವ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಉತ್ತಮ ಅಂಶಗಳನ್ನು ಸರ್ವತೋಮುಖಗೊಳಿಸುವ ಗುರಿಯನ್ನು ಹೊಂದಿರುವುದು. ಜಗತ್ತಿನ ಪ್ರಸಿದ್ಧ ವ್ಯಕ್ತಿಗಳಲ್ಲಿ ವಿವಿಧ ರೀತಿಯ ವ್ಯಾಖ್ಯೆಗಳನ್ನು 'ಶಿಕ್ಷಣ' ಎಂಬ ಪದ ಅಭಿವ್ಯಕ್ತಿಸಿದೆ. "ಮಗುವಿನಲ್ಲಿರುವ" ಸರ್ವತೋಮುಖ ಬೆಳವಣಿಗೆಯ ಗುರಿಯನ್ನು ಶಿಕ್ಷಣ ಹೊಂದಿದೆ, ಎಂದು ಗಾಂಧೀಜಿ ನುಡಿದರೆ ಸ್ವಾಮಿ ವಿವೇಕಾನಂದರ ಪ್ರಕಾರ ಅದು "ಮಾನವನಲ್ಲಿರುವ ದೈವಿಕ ಪರಿಪೂರ್ಣತೆಯ ಅವಿರ್ಭಾವ, ಋಗ್ವೇದ ಹೇಳುವಂತೆ 'ಶಿಕ್ಷಣ ವ್ಯಕ್ತಿಯನ್ನು ಸ್ವಾವಲಂಬಿ ಮತ್ತು ಸ್ವಾರ್ಥರಹಿತಗೊಳಿಸಲಿರುವ ದಾರಿ,' "ಸಹಜ ಪ್ರವೃತ್ತಿಗೆ ಯೋಗ್ಯ ಪರಿಸರದಡಿ ನೀಡುವ ತರಬೇತಿಯೇ ಶಿಕ್ಷಣ" ಎಂಬುವುದು ಪ್ಲೇಟೋ ಅವರ ಅಭಿಪ್ರಾಯ.

ಔಪಚಾರಿಕ ಅಥವಾ ಅನೌಪಚಾರಿಕ ರೀತಿಯಿಂದ ಅಥವಾ ಇನ್ಯಾವುದೇ ರೀತಿಯಿಂದ ಸಿಗುವ ಶಿಕ್ಷಣಕ್ಕೆ ಪ್ರಾಯದ ಮಿತಿಯಿಲ್ಲ, ಅಸಮಾನತೆಯಿಲ್ಲ, ಲಿಂಗಭೇದವಿರುವುದಿಲ್ಲ. ಇಂದು ವ್ಯಕ್ತಿಗೆ ತಾಯಿಯ ಗರ್ಭದಿಂದ ಆರಂಭಿಸಿ ಸಾಯುವ ತನಕ ನಿರಂತರವಾದ ಶಿಕ್ಷಣವು ಲಭಿಸುತ್ತದೆ. ಅಂದರೆ ವ್ಯಕ್ತಿಯ ಜೀವನದ ಮೇಲೆ ಬೀರುವ ಪ್ರತಿಯೊಂದು ಪ್ರಭಾವವು ಕೂಡ ವಿಶಾಲಾರ್ಥದಲ್ಲಿ ಶಿಕ್ಷಣವೇ ಆಗಿದೆ. ತಾಯಿಯ ಗರ್ಭ, ಮನೆ, ಕುಟುಂಬ, ಮಿತ್ರವೃಂದ, ಸಮಾಜ, ಶಿಕ್ಷಕರು, ಪರಿಸರ, ಸಂಸ್ಥೆಗಳು, ಮಾಧ್ಯಮ ಎಲ್ಲವುಗಳು ಒಂದಲ್ಲ ಒಂದು ರೀತಿಯಲ್ಲಿ ಬೀರುವ ಪ್ರಭಾವವು ಪ್ರತ್ಯಕ್ಷ ಅಥವಾ ಪರೋಕ್ಷ ಶಿಕ್ಷಣವನ್ನು ನೀಡುವುದು. ಇದನ್ನು ಅಂದಾಜಿಸಿದರೆ, ಅನುಭವ ಮತ್ತು ಶಿಕ್ಷಣಕ್ಕೆ ಸಾಮಾನ್ಯ ಒಂದೇ ಅರ್ಥವನ್ನು ನೀಡಬಹುದು. ಆದ್ದರಿಂದ ವ್ಯಕ್ತಿ ತನ್ನ ಜೀವನದುದ್ದಕ್ಕು ನಿರಂತರವಾಗಿ ಪಡೆಯುವ ಅನುಭವವೇ ಶಿಕ್ಷಣ ಎಂಬ ಅಭಿಪ್ರಾಯಕ್ಕೆ ನಾವು ಬರಬಹುದಾಗಿದೆ. ಆದ್ದರಿಂದಲೇ 'ಲಾಡ್ಜ್' ಎಂಬ ಚಿಂತಕನ ವ್ಯಾಖ್ಯೆಯಂತೆ "ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ" ಈ ಎಲ್ಲಾ ವಿಷಯಗಳನ್ನು ಕ್ರೋಡೀಕರಿಸಿದಾಗ, ಮಗುವಿನ ಸರ್ವ ಪ್ರತಿಭೆಗಳನ್ನು, ಶಕ್ತಿಯನ್ನು, ಸಮಾಜದಲ್ಲಿ ಸಂಸ್ಕಾರಯುತವಾಗಿ ಬಳಸುವಂತೆ ಮಾಡುವ ಆಗಾಧ ಪ್ರಭಾವ ಶಿಕ್ಷಣಕ್ಕಿದೆ. ಅದು ಶಕ್ತಿಯನ್ನು ಹುಟ್ಟು ಹಾಕಬಹುದು, ಶಿಸ್ತನ್ನು ರೂಢಿಸುವಂತೆ ಮಾಡಬಹುದು, ಒಗ್ಗಟ್ಟಿಗೆ ಕಾರಣವಾಗಬಹುದು, ಶುಚಿತ್ವವನ್ನು ಬಿಂಬಿಸಬಹುದು, ಸಂದರ್ಭಗಳಲ್ಲಿ ವ್ಯಕ್ತಿಯನ್ನು ಜಾಗ್ರತನನ್ನಾಗಿಸಬಹುದು, ಸತ್ಯದ ಮಹತ್ವವನ್ನು ತಿಳಿಸಬಹುದು, ಸ್ವಾತಂತ್ರ್ಯದ ಆಶಯವನ್ನು ಸ್ಪಷ್ಟಪಡಿಸಬಹುದು, ಅರ್ಥೈಸುವಿಕೆಯನ್ನು ವಿಸ್ತರಿಸಬಹುದು ಮತ್ತು ಮೌಲ್ಯಯುತ ಜೀವನದಲ್ಲಿ ವಿಚಾರಗಳಿಗೆ ವಿಧೇಯನಾಗಿಸಬಹುದು.

ಇನ್ನು ಅದನ್ನು ಆಧುನಿಕ ಸ್ಥಿತಿಗತಿಗಳಿಗೆ ಅನ್ವಯಿಸಿದಾಗ, ಶಿಕ್ಷಣ ವ್ಯಕ್ತಿಯ ಮನೋಭಾವನೆ ಮತ್ತು ವರ್ತನೆಗಳನ್ನು ಬಿಂಬಿಸುವುದು. ವ್ಯಕ್ತಿಯೊಬ್ಬ ತನ್ನ ಇರುವಿಕೆಯನ್ನು, ಅಸ್ತಿತ್ವವನ್ನು ಮತ್ತು ಅದಕ್ಕೆ ಪೂರಕವಾಗಿ ಬದುಕಿನ ದಿಕ್ಕುದಿಶೆಯನ್ನು ನಿರ್ಧರಿಸಲು ಶಿಕ್ಷಣ ನೆರವಾಗುವುದು. ಹುಟ್ಟಿದ ಪ್ರತಿಯೊಬ್ಬರು

ಉತ್ತಮ ಮತ್ತು ಕೆಟ್ಟ ಗುಣಗಳೊಂದಿಗೆ ಬೆಳೆಯುತ್ತಾರೆ. ಯಾರು ಪರಿಪೂರ್ಣರಲ್ಲ. ಆದರೆ ಶಿಕ್ಷಣದಿಂದ ಯಾವ ಗುಣಗಳನ್ನು ತನ್ನಲ್ಲಿ ಇರಿಸಿಕೊಳ್ಳಬೇಕು, ಯಾವುದನ್ನು ಬಿಟ್ಟು ಬಿಡಬೇಕು, ಯಾವುದನ್ನು ಬದಲಾಯಿಸಿ ಅಳವಡಿಸಿಕೊಳ್ಳಬೇಕು, ಯಾವುದನ್ನು ಹೊಸತಾಗಿ ಸೇರಿಸಿಕೊಳ್ಳಬೇಕೆಂಬ ವೈಚಾರಿಕ ಚಿಂತನೆ ಬರಬಹುದು. ಸಾಮಾಜೀಕರಣ ಪ್ರಕ್ರಿಯೆಯಲ್ಲಿ ವ್ಯಕ್ತಿ ನಿರಂತರವಾಗಿ ಪಡೆಯುವ ಶಿಕ್ಷಣ ಅವನನ್ನು ವಿಷಯಗಳಲ್ಲಿ ವೈಚಾರಿಕತೆ ಮತ್ತು ವಿಶ್ಲೇಷಣಾತ್ಮಕತೆಯನ್ನು ಬಲಗೊಳಿಸುತ್ತದೆ.

ಈ ಎಲ್ಲ ಅಂಶಗಳೇ ಅವನನ್ನು ಅಭಿವೃದ್ಧಿಯ ಕಡೆಗೆ ಮುಖ ಮಾಡಿಸಬಹುದಾಗಿದೆ. ತನ್ನ ಇರುವಿಕೆಯ ಅರ್ಥ, ಅಗತ್ಯ ಮತ್ತು ಅಸ್ತಿತ್ವಕ್ಕಾಗಿ ಅವನು ನಡೆಸಬೇಕಾದ ನಿರಂತರ ಹೋರಾಟದಲ್ಲಿ, ಶಿಕ್ಷಣ ಅವನಿಗೆ ಅನುಭವವನ್ನು, ಅನುಭವ ಶಿಕ್ಷಣವನ್ನು ಕೊಡುತ್ತಾ ಸಾಗುತ್ತದೆ. ಇಲ್ಲಿ ವ್ಯಕ್ತಿ ನಾಗರಿಕ ಶಿಸ್ತಿನಿಂದ ಕೂಡಿದ ಸಂಸ್ಕಾರಯುತ ಜೀವನದ ಪದಗ್ರಹಣಕ್ಕೆ ಶಿಕ್ಷಣವನ್ನು ಪ್ರಮುಖ ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ. ಅನ್ನ ಮತ್ತು ಅರಿವು ಈ ಎರಡು ಪದಗಳ ಮಧ್ಯೆ ವ್ಯತ್ಯಾಸ, ಸಾಮ್ಯತೆ ಮತ್ತು ಪೂರಕವಾದ ಸಂಬಂಧಗಳ ಅರ್ಥವನ್ನು ಹುಡುಕಲು ಅವನಿಗೆ ಶಿಕ್ಷಣ ನೆರವಾಗುವುದು.

**ಶಿಕ್ಷಣದ ಗುರಿಯೇನು?**

ಅಪರಿಪೂರ್ಣತೆಯಿಂದ ಪೂರ್ಣತೆಯ ಕಡೆಗೆ ಎಂಬುವುದೇ ಶಿಕ್ಷಣದ ನೈಜ ಗುರಿಯಾಗಿರುವುದು. ಆದರ್ಶ ಮತ್ತು ವಾಸ್ತವಿಕ ದೃಷ್ಠಿ ಕೋನಗಳಲ್ಲಿ ಇದನ್ನು ನೋಡಬಹುದಾಗಿದೆ. ಆದರ್ಶ ದೃಷ್ಠಿಕೋನವೆಂದರೆ, ಯಾವುದಾದರೊಂದು ಆದರ್ಶವನ್ನಿಟ್ಟುಕೊಂಡು ಶಿಕ್ಷಣವನ್ನು ಪಡೆಯುವುದು. ಉದಾ: ನಾನು ಅವನಂತೆಯೇ ಆಗಬೇಕು, ಅವನ ರೀತಿಯ ಜೀವನ ನನ್ನದಾಗಬೇಕು ಎಂದಾಗಿದೆ. ಇಲ್ಲಿ ವ್ಯಕ್ತಿ ವೈಯಕ್ತಿಕ ಆದ್ಯತೆಯನ್ನು ಸಾಮಾಜಿಕ ಬದ್ಧತೆಯೊಂದಿಗೆ ಸಂಯೋಜಿಸಲು ಹೆಚ್ಚು ಪ್ರಯತ್ನವನ್ನು ಮಾಡುತ್ತಾನೆ. ವಾಸ್ತವಿಕ ದೃಷ್ಠಿಕೋನದಂತೆ, ವ್ಯಕ್ತಿ ತನ್ನ ಸುತ್ತಲಿನ ನೈಜ ವಾಸ್ತವ ಏನಿದೆ, ಜೀವನಕ್ರಮ, ಸಮಾಜ ಆರ್ಥಿಕ ಸ್ಥಿತಿಗತಿಗಳಿಗೆ ಪೂರಕವಾಗಿ ಶಿಕ್ಷಣವನ್ನು ಪಡೆಯುತ್ತಾನೆ. ಇಲ್ಲಿ ವ್ಯಕ್ತಿ ಲಭ್ಯವಿರುವ ಮಾನವ ಸಂಪನ್ಮೂಲಗಳಿಗೆ ಆಧರಿಸಿ ಶಿಕ್ಷಣವನ್ನು ಪಡೆಯುತ್ತಾನೆ ಎಂದರೆ, ವ್ಯವಸ್ಥೆ, ಸಮಯ ಅನುಕೂಲತೆಯನ್ನು ಗಣನೆಗೆ ತೆಗೆದುಕೊಂಡು ಶಿಕ್ಷಣವನ್ನು ಪಡೆಯಲು ಅವನು ಹೆಚ್ಚು ಆಸಕ್ತನಾಗುತ್ತಾನೆ. ಒಟ್ಟು ಯೋಚಿಸುವಾಗ ವ್ಯಕ್ತಿ ತನ್ನ ಜೀವನ ಕೌಶಲ್ಯದ ಅಭಿವೃದ್ಧಿಯ ಜತೆಗೆ ಸಾಮಾಜಿಕ ಜೀವನಕ್ಕೆ ಹೊಂದಿಕೊಳ್ಳುವಂತಹ ಜೀವನ ನಡೆಸಲು ಅವಕಾಶ ಪಡೆಯುವುದೇ ಶಿಕ್ಷಣದ ಉದ್ದೇಶವಾಗಿರಬೇಕು. ವ್ಯಕ್ತಿತ್ವ, ವಿಕಸನ, ಸಮೃದ್ಧಿ ಮತ್ತು ವೈಶಾಲ್ಯತೆ ಇದರ ಪರಿಣಾಮವಾಗಬಹುದಾಗಿದೆ. ಕಾರಣ ವ್ಯಕ್ತಿ ನಿರಂತರ ಶಿಕ್ಷಣವನ್ನು ಔಪಚಾರಿಕ, ಅಸೌಪಚಾರಿಕ ಅಥವಾ ಇತರ ವಿಧಾನದಿಂದ ಪಡೆಯುವುದರಿಂದ ಇಲ್ಲಿ ವಾಸ್ತವಿಕ ಮತ್ತು ಆದರ್ಶ ದೃಷ್ಠಿಕೋನವು ತನ್ನಷ್ಟಕ್ಕೆ ಶಿಕ್ಷಣದ ಗುರಿಯ ಸಾರ್ಥಕತೆಯಲ್ಲಿ ಅನ್ವಯವಾಗುವುದು.

ಆದ್ದರಿಂದಲೇ ಶಿಕ್ಷಣದ ಗುರಿಯನ್ನು ಈಡೇರಿಸುವಲ್ಲಿ ಅವನು ಪಡೆಯುವ ಶಿಕ್ಷಣ ವಿಧಾನವು, ಅಂದರೆ ಔಪಚಾರಿಕ, ಅನೌಪಚಾರಿಕ ಮತ್ತು ಇತರ ವಿಧಾನ, ವಾಸ್ತವಿಕ ಮತ್ತು ಆದರ್ಶ ದೃಷ್ಟಿಕೋನವನ್ನು ನಿರ್ಧರಿಸಬಹುದು. ಇಲ್ಲಿ ವ್ಯಕ್ತಿಯು ಔಪಚಾರಿಕ ವಿಧಾನವಾದ ಶಾಲಾ ಕಾಲೇಜ್ ಶಿಕ್ಷಣ, ಅನೌಪಚಾರಿಕ ಶಿಕ್ಷಣದಂತೆ ಸಾಮಾಜೀಕರಣ ಪ್ರಕ್ರಿಯೆಯಿಂದ ಇತರ ವಿಧಾನದಂತೆ ದೂರ ಶಿಕ್ಷಣದಿಂದ ಶಿಕ್ಷಣವನ್ನು ಪಡೆಯುವಾಗ ಅವನು ತನ್ನ ಆಸಕ್ತಿ, ಸಂಪನ್ಮೂಲ ಮತ್ತು ಅನುಕೂಲತೆಯನ್ನು ಗಣನೆಗೆ ತೆಗೆದುಕೊಳ್ಳುವನು. ಈ ಘಟಕಗಳು ಅವನ ಶಿಕ್ಷಣದ ಗುರಿಯನ್ನು ನಿರ್ಧರಿಸುತ್ತವೆ. ಅದಲ್ಲದೆ ಈ ಪ್ರಕ್ರಿಯೆಯು ಗರ್ಭದಿಂದ ಗೋರಿಯ ತನಕ ನಿರಂತರತೆಯನ್ನು ಪಡೆದಿರುವುದರಿಂದ ಶಿಕ್ಷಣದ ಗುರಿಯು ಚಂಚಲತೆಯ ಲಕ್ಷಣವನ್ನು ಹೊಂದಿದೆ.

**ಶಿಕ್ಷಣದ ವ್ಯಾಪ್ತಿ/ ಮಹತ್ವ:** ಭೂಮಿಯ ವೇಗಕ್ಕಿಂತಲೂ ಕ್ಷಿಪ್ರವಾದ ಬೆಳವಣಿಗೆಯ ವೇಗದೊಂದಿಗೆ ಸಮತೋಲನವನ್ನು ಕಂಡುಕೊಳ್ಳುವ ತವಕದಲ್ಲಿ ಶಿಕ್ಷಣ ಅಗತ್ಯದ ಘಟಕವಾಗಿ ಬರುವುದು. ಇದು ಹಿಂದೆ ನಾಗರಿಕ ಮೆಟ್ಟಿಲನ್ನು ಏರಲು ನೆರವಾಗುತ್ತಿದ್ದರೆ, ಇಂದು ವಿಚಾರಯುಕ್ತ ನಾಗರಿಕ ಸಮಾಜದ ರೂಪಿಕರಣಕ್ಕೆ ಕಾರಣವಾಗುವುದು. ಜೀವನ ಸಂಘರ್ಷದ ಸುದೀರ್ಘ ಹೋರಾಟದಲ್ಲಿ ಶಿಕ್ಷಣ ಅಗತ್ಯವಾಗುತ್ತಿದೆ. ಮಾನವನ ಅಭಿವೃದ್ಧಿಯ ದಾರಿಯನ್ನು ನಾವು ಗಮನಿಸಿದರೆ ಅದರ ಮಹತ್ವದ ಅರಿವಾಗುವುದು. ಉದಾ: ಸತೀ ಪದ್ಧತಿಯಂತಹ ಸಾಮಾಜಿಕ ಪಿಡುಗು ಈಗ ನಿಧಾನವಾಗಿ ಕಣ್ಮರೆಯಾಗುತ್ತಿದ್ದರೆ, ಅದಕ್ಕೆ ಕಾರಣ ಶಿಕ್ಷಣವೇ ಆಗಿದೆ. ಸ್ಪರ್ಧಾತ್ಮಕತೆಯ ಜಗತ್ತಿನಲ್ಲಿ ಅರಿವಿನಿಂದ ಕೂಡಿದ ಹೊಂದಾಣಿಕೆಯುಕ್ತ ಜೀವನವನ್ನು ನಡೆಸುವುದು ಶಿಕ್ಷಣದಿಂದಲೇ ಸಾಧ್ಯವಾಗುವುದು. ಪಾಶ್ಚಾತ್ಯ ಸಾಹಿತ್ಯವು ಹರಿದು ಬಂದಂತೆ, ವೈಜ್ಞಾನಿಕ ಮನೋಭಾವನೆಯನ್ನು, ತಾರ್ಕಿಕ ಮನೋಭಾವನೆಯಿಂದ ನಮಗಿಂದು ನೋಡುವುದು ಸಾಧ್ಯವಾಗಿದೆ. ಆದರೆ ಇತರ ದೇಶಗಳಿಗೆ ಹೋಲಿಸಿದಾಗ ಭಾರತದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ನಾವು ಮಾನವ ಸಂಪನ್ಮೂಲಕ್ಕೆ ಸರಿಯಾಗಿ ಬಳಸದಿರುವುದು ಕಾಣುತ್ತದೆ. ಅದಕ್ಕೆ ನಮಗೆ ಇಲ್ಲಿರುವ ಅವಕಾಶಗಳು ಕಾರಣವಾಗಬಹುದು.

ಪಾಶ್ಚಾತ್ಯ ದೇಶಗಳಲ್ಲಿ ಕಲಿಕಾ ಸಾಮರ್ಥ್ಯದ ವಿಭಾಗಗಳಿಗೆ ಬೇಕಾಗಿ ಪ್ರತ್ಯೇಕ ಶಾಲೆಗಳಿದ್ದರೆ ನಮ್ಮ ದೇಶದಲ್ಲಿ ಈ ಮೂರು ವಿಭಾಗಗಳಿಗೂ ಒಂದೇ ಶಾಲೆಯಲ್ಲಿ ಕಲಿಸಬೇಕಾಗಿದೆ. ಆದ್ದರಿಂದಲೇ ಇಲ್ಲಿ ಗುಣಾತ್ಮಕ ಶಿಕ್ಷಣ ಹೆಚ್ಚು ಅಗತ್ಯ ಬೀಳುವುದು. ಅದಲ್ಲದೆ ಹಿಂದೆ ದ್ವಿಮುಖ ಧಾರೆ (ಶಿಕ್ಷಕ, ಮಗು)ಯಾಗಿದ್ದ ಶಿಕ್ಷಣ ಇಂದು ಬಹುಮುಖಧಾರೆಯಾಗಿ ಬದಲಾಗಿದೆ. ಅಂದರೆ ಶಿಕ್ಷಣವು ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಕಾರಣವಾಗುವುದರ ಜೊತೆಗೆ ಸಮೂಹದ ಅಭಿವೃದ್ಧಿಯ ಕಡೆಗೂ ಗಮನ ಹರಿಸುತ್ತಿದೆ. ಈ ನಿಟ್ಟಿನಲ್ಲಿ ನೋಡುವಾಗ ಶಿಕ್ಷಣದ ವ್ಯಾಪ್ತಿ ಈಗ ಹಿಂದಿನಿಂದ ವಿಶಾಲವಾಗಿದೆ. ವೈಯಕ್ತಿಕತೆಯಿಂದ ಸಾಮಾಜಿಕತೆಗೆ ಎಂದು ಬದಲಾಗುವುದರ ಜತೆಗೆ ಸಮಗ್ರತೆ, ಸೌಹಾರ್ದತೆ, ಐಕ್ಯತೆಯತ್ತ ಮುಖ ಮಾಡಿದೆ. ಆದ್ದರಿಂದಲೇ ಈಗ ಶಿಕ್ಷಣ ಮಗುವಿನಿಂದ ಕುಟುಂಬಕ್ಕೆ, ಸಮುದಾಯಕ್ಕೆ, ಸಮಾಜಕ್ಕೆ.

ಪ್ರಸ್ತುತ ವಿದ್ಯಾಮಾನದಲ್ಲಿ ನೈತಿಕತೆ, ಜೀವನದ ಮೌಲ್ಯಗಳು ಮಾಯವಾಗುತ್ತಿರುವುದರಿಂದ ಶಿಕ್ಷಣ, ಪ್ರತ್ಯೇಕವಾಗಿ ಗುಣಾತ್ಮಕ ಮೌಲ್ಯ ಶಿಕ್ಷಣ ಮತ್ತಷ್ಟು ವ್ಯಾಪ್ತಿ, ಮಹತ್ವವನ್ನು ಪಡೆಯುವುದು. ಈ ಆಶಯದಿಂದಲೇ ಈಗ 'ವಿಶ್ವ ಮಾನವ ಪರಿಕಲ್ಪನೆಯತ್ತ ಶಿಕ್ಷಣ' ಎಂಬ ನೂತನ ಶಿಕ್ಷಣ ಪ್ರಕ್ರಿಯೆಯ ಕಲ್ಪನೆಯು ಜಾತಿ, ಧರ್ಮಗಳನ್ನು ಭೇದ ಭಾವಗಳಿಂದ ಅತೀತವಾದ ಸಮಾನತೆ, ಸೋದರತೆ, ಐಕ್ಯತೆ, ರಾಷ್ಟ್ರೀಯ ಭಾವೈಕ್ಯತೆಗಳನ್ನೊಳಗೊಂಡು ಮೌಲ್ಯಯುಕ್ತ ಗುಣಾತ್ಮಕ ಶಿಕ್ಷಣವನ್ನು ನೀಡಲು ಪ್ರಯತ್ನಿಸಲಿದೆ.

**ಭಾರತದಲ್ಲಿ ಶಿಕ್ಷಣ ನಡೆದು ಬಂದ ದಾರಿ:**

ಜಗತ್ತಿನ ಅತೀದೊಡ್ಡ ಪ್ರಜಾಪ್ರಭುತ್ವ ದೇಶವಾದ ಭಾರತದ ಸಂವಿಧಾನವು ತನ್ನ ೪೫ನೇ ಅನುಚ್ಛೇದದಲ್ಲಿ ವಿವರಿಸಿರುವಂತೆ 14 ವರ್ಷಗಳವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕೊಡಲ್ಪಟ್ಟಿದೆ. ಅಂದಿನಿಂದ ಪ್ರತೀ ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣದ ಉಲ್ಲೇಖ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಆ ನಂತರದಲ್ಲಿ ರೂಪಿಸಲ್ಪಟ್ಟ ಹಲವು ಸಮಿತಿಗಳು, ಆಯೋಗಗಳ ವರದಿಗಳ ಫಲವಾಗಿ ಶಿಕ್ಷಣ ಪದ್ಧತಿಯಲ್ಲಿ ಬದಲಾವಣೆಗಳು ಬರುತ್ತಲೇ ಇವೆ. ಹಿಂದುಳಿದ ಶಿಕ್ಷಣಕ್ಕೆ ಮಹತ್ವ ನೀಡುವ ವಿಲಿಯಂ ಹಂಟರ್ ಕಮಿಷನ್ ಭಾರತದಲ್ಲಿ ಮಾತೃಭಾಷೆಯ ಪರಿಕಲ್ಪನೆ, ಮಹಿಳಾ ಶಿಕ್ಷಣವನ್ನು ಉತ್ತೇಜಿಸುವಲ್ಲಿ ಪ್ರಧಾನ ಪಾತ್ರ ವಹಿಸಿತು. ಮಾತೃಭಾಷೆಯಲ್ಲೇ ಶಿಕ್ಷಣ ನೀಡಬೇಕೆಂದೂ ಮಹಿಳೆಯರ ಶಿಕ್ಷಣ ಮತ್ತು ಹಿಂದುಳಿದವರ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂದು ಪ್ರತಿಪಾಲಿಸಿದ್ದ ಫಲವಾಗಿ ಭಾರತದಲ್ಲಿ, ಆಂಗ್ಲರ ಆಳ್ವಿಕೆಯಲ್ಲೇ ಮಾತೃಭಾಷೆಯಲ್ಲಿ ಶಿಕ್ಷಣ ಮತ್ತು ಮಹಿಳಾ ಕಾಲೇಜುಗಳು ಪ್ರಾರಂಭವಾದವು. ಹಿಂದುಳಿದ ವರ್ಗಗಳಿಗೆ ಮಹತ್ವದ ಮೈಲುಗಲ್ಲಾದ ಈ ಆಯೋಗದ ಶಿಫಾರಸು ಭಾರತದಲ್ಲಿ ಉಚಿತ ಮತ್ತು ಕಡ್ಡಾಯದ ಶಿಕ್ಷಣವನ್ನು ಮಾತ್ರ ಒಪ್ಪಲಿಲ್ಲ.

ಇದಕ್ಕೆ ಮೊದಲು ಪ್ರಾಚೀನ ಕಾಲದಿಂದಲೇ ಶಿಕ್ಷಣವು ವೈದಿಕರ ಆಸ್ತಿಯಾಗಿತ್ತು ಅಂದರೆ ಕ್ಷತ್ರಿಯರು ಮತ್ತು ಬ್ರಾಹ್ಮಣರು ಮಾತ್ರ ಗುರುಕುಲ ಪದ್ಧತಿಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದರು. ಉಳಿದವರಿಗೆ ಶಿಕ್ಷಣ ದೂರದ ಮಾತಾಗಿತ್ತು. ಆನಂತರದ ದಿನಗಳಲ್ಲಿ ಅಸ್ಪೃಶ್ಯತೆಯು ನಿಧಾನವಾಗಿ ಮಾಯವಾದಂತೆ ಶಿಕ್ಷಣವು ಕೆಳವರ್ಗಗಳಿಗೂ ದಕ್ಕುವಂತಾಯಿತು. ಸಾಮಾಜಿಕ, ಧಾರ್ಮಿಕ ಕಾರ್ಯಕರ್ತರು ಈ ನಿಟ್ಟಿನಲ್ಲಿ ಮಾಡಿದ ಪ್ರಯತ್ನಗಳನ್ನು ಇಲ್ಲಿ ಅಲ್ಲಗಳೆಯುವಂತಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಗಾಂಧೀಜಿಯ ದೇಶಿಯ ಶಿಕ್ಷಣ ಮಹತ್ವ ಪಡೆದಿತ್ತು.

ಮಾತೃಭಾಷೆಯೊಂದಿಗೆ ಕಡ್ಡಾಯ ಮತ್ತು ಉಚಿತ ಶಿಕ್ಷಣದ ಜೊತೆಗೆ, ಜೀವನ ಕೌಶಲ್ಯ ತರಬೇತಿಯ ಗಾಂಧೀಜಿಯ ದೇಶೀಯ ಶಿಕ್ಷಣ ಕ್ರಮ ಮಹತ್ವದ್ದಾಯಿತು. ಶಿಕ್ಷಣದೊಂದಿಗೆ ವೃತ್ತಿಗಳಾದ ಮಡಿಕೆ, ಬಡಗಿ, ಚಮ್ಮಾರಿಕೆ, ಬುಟ್ಟಿ, ಕೈಮಗ್ಗದ ತರಬೇತಿಗಳನ್ನು ನೀಡುವ ಮೂಲಕ ಮಗುವನ್ನು ಶಿಕ್ಷಣದೊಂದಿಗೆ ಸ್ವ-ಉದ್ಯೋಗಕ್ಕೆ ತಯಾರು ಮಾಡುವುದು ಈ ಶಿಕ್ಷಣದ ಉದ್ದೇಶ. ಇದು ಜಾತ್ಯಾತೀತ ಮತ್ತು ಸಮಗ್ರತೆಗೆ

ಒತ್ತು ಕೊಡುವ ಶಿಕ್ಷಣವಾದ್ದರಿಂದ ಇದನ್ನು ರಾಷ್ಟ್ರೀಯ ಶಿಕ್ಷಣ ಎಂದು ಕರೆಯಲಾಯಿತು. ಟಾಗೋರರ 'ವಿಶ್ವಭಾರತಿ' ಸಹ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಕೊಡುಗೆ ನೀಡಿದೆ. ಕೋ-ಎಜುಕೇಶನ್, ಸ್ಕಾಲರ್‌ಶಿಪ್, ಇಂಗ್ಲೀಷ್ ಭಾಷೆಗಳಿಗೆ ಮಹತ್ವವನ್ನು ಬ್ರಿಟಿಷ್ ಭಾರತದಲ್ಲಿ ಕಲ್ಪಿಸಲಾಯಿತು. ಹಂಟರ್ ಕಮಿಷನ್ ನಂತೆಯೇ 'ಉಡ್ಸ್ ಡಿಸ್ಪಾಚ್' ಲಾರ್ಡ್ ಮೆಕಾಲೆ, ಲಾರ್ಡ್ ಬೆಂಟಿಂಕ ನಿರ್ಣಯಗಳು ಶಿಕ್ಷಣ ಕ್ಷೇತ್ರದಲ್ಲಿ ಪ್ರಧಾನವಾಗಿವೆ. 1948 ವಿಶ್ವವಿದ್ಯಾನಿಲಯಗಳ ಶಿಕ್ಷಣ ಆಯೋಗ, ಡಾ.ರಾಧಾಕೃಷ್ಣನ್‌ರ ನೇತೃತ್ವದಲ್ಲಿ ರಚಿಸಲ್ಪಟ್ಟು ಪ್ರೌಢಶಿಕ್ಷಣದ ಸಮಸ್ಯೆ ವಿವರಿಸಿದೆ. 1952-53ರ ಡಾ. ಲಕ್ಷ್ಮಣಸ್ವಾಮಿ ಮುದಲಿಯಾರರ 'ಸೆಕಂಡರಿ ಶಿಕ್ಷಣ ಆಯೋಗ'ವು ಪ್ರಾಥಮಿಕ ಶಾಲಾ ಶಿಕ್ಷಣದ ಬಗ್ಗೆ ಸಲಹೆಯನ್ನು ನೀಡಿದೆ. 1964-66ರ ಡಾ.ಡಿ.ಎಸ್. ಕೊಠಾರಿಯವರ ಅಧ್ಯಕ್ಷತೆಯಲ್ಲಿ ರಚಿಸಲ್ಪಟ್ಟ "ಭಾರತೀಯ ಶಿಕ್ಷಣಾ ಆಯೋಗ' ಏಕರೂಪದ ಶಿಕ್ಷಣ ವ್ಯವಸ್ಥೆಯನ್ನು (10+2+3) ಶಿಫಾರಸು ಮಾಡಿತು. ಈ ಆಯೋಗದ ಶಿಫಾರಸಿನ ಆಧಾರದಲ್ಲಿ 1968ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಭಾರತ ಸರಕಾರ ರಚಿಸಿತು. ಈ ನೀತಿಯಲ್ಲಿ ಸಾಮಾನ್ಯ ಪೌರತ್ವ, ಸಂಸ್ಕೃತಿ, ರಾಷ್ಟ್ರೀಯ ಏಕತೆ, ವಿಜ್ಞಾನ, ತಾಂತ್ರಿಕತೆ, ಶಿಕ್ಷಣ ಮತ್ತು ಜೀವನದ ಸಂಬಂಧ, ನೈತಿಕ ಮೌಲ್ಯ ಇತ್ಯಾದಿಗಳಿಗೆ ಪರಿಗಣನೆ ನೀಡಿತು. ಆದರೆ ಈ ನೀತಿಯು ಆರ್ಥಿಕ ಮತ್ತು ಆಡಳಿತಾತ್ಮಕ ತೊಂದರೆಯಿಂದಾಗಿ ಯಶಸ್ವಿ ಕಾಣಲಿಲ್ಲ.

'ಏಳರಿಂದ 14ವರ್ಷದ ಮಕ್ಕಳಿಗೆ ಉಚಿತ ಪ್ರಾಥಮಿಕ ಶಿಕ್ಷಣ' ದೊರೆಯಬೇಕಾಗಿರುವುದರಿಂದ ಈ ಹಂತದಲ್ಲಿ ಇಂಗ್ಲೀಷನ್ನು ಕೈಬಿಡುವುದೊಳ್ಳೆಯದು. ಶೈಕ್ಷಣಿಕ ವಿಷಯಗಳೊಂದಿಗೆ ವೃತ್ತಿ ಶಿಕ್ಷಣಕ್ಕೆ ಸಂಬಂಧವನ್ನು ಕಲ್ಪಿಸಬೇಕು, ಆಗ ಕುಂಬಾರಿಕೆ, ಹೈನುಗಾರಿಕೆ, ವ್ಯವಸಾಯ, ನೂಲುವುದು ಇತ್ಯಾದಿಗಳಲ್ಲಿ ಮಗುವಿಗೆ ಗೌರವ ಉಳಿಯುವುದು. ಮಗುವಿನ ವಿಕಾಸ ಶೀಲತೆಗೆ ಮೂಲೋದ್ಯೋಗ, ಮಾತೃಭಾಷೆ, ವಿಜ್ಞಾನ, ಕಲೆ, ಸಂಗೀತ, ಗೃಹಜ್ಞಾನ ಇತ್ಯಾದಿಗಳು ಶಿಕ್ಷಣದಲ್ಲಿ ಅಡಕವಾಗಿರಬೇಕು. ದೇಹ ಮನಸ್ಸು ಮತ್ತು ಹೃದಯಗಳಿಗೆ ಮಹತ್ವಗಳನ್ನು ಶಿಕ್ಷಣ ಕಲ್ಪಿಸಬೇಕು. ಆದ್ದರಿಂದಲೇ ಇದನ್ನು 'ಬೇಸಿಕ್ ಎಜುಕೇಶನ್' (ಜೀವನ ಶಿಕ್ಷಣ) ಎಂದು ಕರೆಯಲಾಯಿತು. ಈ ಅಂಶವನ್ನು ರಾಷ್ಟ್ರೀಯ ಶಿಕ್ಷಣದಲ್ಲಿ ಸೇರಿಸಲಾಗಿತ್ತು.

1976ರಲ್ಲಿ ಭಾರತದಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದ್ದ ಸಂದರ್ಭದಲ್ಲಿ 42ನೆಯ ಸಂವಿಧಾನ ತಿದ್ದುಪಡಿಯಂತೆ ಶಿಕ್ಷಣವನ್ನು ಕನ್ ಕರೆಂಟ್ ಲಿಸ್ಟ್‌ಗೆ ಸೇರಿಸಲಾಯಿತು.

ಅನಂತರ ಬಂದ ರಾಷ್ಟ್ರೀಯ ಶಿಕ್ಷಣ ನೀತಿ 1984ರಂತೆ, ಶಾಲಾ ಶಿಕ್ಷಣದ ಅವಧಿಯು 7+3+2, ಮಾತೃಭಾಷಾ ಕಲಿಕೆ, ವಿಜ್ಞಾನ ಮತ್ತು ಸಾಮಾಜಿಕ ಪರಿಸರದ ಪರಿಚಯ, ಶಾಲಾ ಹಂತದಲ್ಲಿ ದೇಶೀಯ ಮತ್ತು ಆಂಗ್ಲ ಭಾಷೆಗೆ ಪ್ರಾಶಸ್ತ್ಯ, ಶಾಲಾ ಚಟುವಟಿಕೆಗಳಿಗೆ ಹೊಂದಿಕೊಳ್ಳುವಂತೆ ಕ್ರೀಡಾ ಚಟುವಟಿಕೆಗಳು, ಸಾಂಪ್ರದಾಯಿಕ ವಲ್ಲದ ಕ್ರಮದಲ್ಲಿ ಶಿಕ್ಷಣ ನೀಡುವುದು, ಕೃಷಿ ಮತ್ತು ತಾಂತ್ರಿಕ ಶಿಕ್ಷಣಕ್ಕೆ ಪ್ರಾಮುಖ್ಯತೆ, ಅನಕ್ಷರತೆಯ ನಿರ್ಮೂಲನೆಗೆ ಕಾರ್ಯಕ್ರಮಗಳು, ಶಿಕ್ಷಕರಿಗೆ ತರಬೇತಿ 10 ಮತ್ತು 12ನೇ ತರಗತಿಯಲ್ಲಿ

ಪಬ್ಲಿಕ್ ಪರೀಕ್ಷೆಗಳು, ಶಿಸ್ತನ್ನು ರೂಢಿಸಲು ಸ್ಕೌಟ್ಸ್, ಗೈಡ್, ಎನ್.ಎಸ್.ಎಸ್. ಇತ್ಯಾದಿಗಳ ರಚನೆ, ಮಕ್ಕಳಲ್ಲಿ ರಾಷ್ಟ್ರೀಯ ಭಾವನೆ ಬೆಳೆಸುವುದು, ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಗನುಗುಣವಾಗಿ ಪಠ್ಯಕ್ರಮ ರಚಿಸುವುದು ಇತ್ಯಾದಿ ಮುಖ್ಯ ಅಂಶಗಳನ್ನು ಒಳಗೊಂಡಿತ್ತು.

ಇದೇ ರೀತಿಯಲ್ಲಿ 1986ರ ಹೊಸ ಶಿಕ್ಷಣ ನೀತಿಯ ಪ್ರಮುಖ ಪರಿಕಲ್ಪನೆಯು ಸಮನ್ವಯ ಶಿಕ್ಷಣವಾಗಿದೆ. ವಿಕಲರಿಗೂ ಸಮಾನ ಶಿಕ್ಷಣದ ಆಶಯವು ಇದಾಗಿದೆ. ವಿಕಲಚೇತನರಿಗೆ ಸಮಾನ ಅವಕಾಶ ಕಲ್ಪಿಸುವ ಜತೆಗೆ ಮಕ್ಕಳಲ್ಲಿರುವ ಋಣಾತ್ಮಕ ಒಲ ವನ್ನು ತೊಡೆದು ಹಾಕುವುದು, ಸಾರ್ವತ್ರಿಕತೆಯನ್ನು ಬೆಳೆಸುವುದು ಕೂಡ ಇದರ ಮಹತ್ತ್ವಾದ ಉದ್ದೇಶಗಳಲ್ಲೊಂದಾಗಿದೆ.

'ಶಿಕ್ಷಣವು ಭವಿಷ್ಯಕ್ಕೆ ಸಂಬಂಧಿಸಿದ ವಿಷಯ. ಆದ್ದರಿಂದ ಇದಕ್ಕೆ ಸಂಬಂಧಿಸಿದ ವಿಷಯಕ್ರಮಗಳನ್ನು ರೂಪಿಸುವವರು ಸಮಸ್ತ ನಾಗರಿಕರಾಗಿರಬೇಕು. ಅಂದರೆ ಇವರಲ್ಲಿ ರಕ್ಷಕರು, ಮಕ್ಕಳು, ಶಿಕ್ಷಕರು, ಸಮಾಜ ಸೇವಕರು, ಸರಕಾರೇತರ ಸಂಸ್ಥೆಗಳು, ಬುದ್ಧಿಜೀವಿಗಳು ಸಮುದಾಯದವರೆಲ್ಲರೂ ಸೇರಿ ಈ ಮಹತ್ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು ಎಂದಾಗಿದೆ. ಈ ಪ್ರಕ್ರಿಯೆಯು ಫಲಿತಾಂಶವನ್ನು ಎಲ್ಲಾ ಕ್ರೋಢೀಕರಿಸಿ, ಚರ್ಚಿಸಿ, ರಚಿತವಾದ ಸಮಿತಿ/ ಆಯೋಗವೇ 1986ರ ಹೊಸ ಶಿಕ್ಷಣ ನೀತಿಯಾಗಿದೆ. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ, ವಯಸ್ಕರ ಶಿಕ್ಷಣ, ಸ್ವಯಂ ಸೇವಾ ಸಂಸ್ಥೆಗಳು, ಶಿಕ್ಷಕ ತರಬೇತಿ, ಗುಣಮಟ್ಟ, ಪರೀಕ್ಷಾ ವಿಧಾನದ ಪರಿಷ್ಕರಣೆ, ರಾಜಕೀಯ ಮುಕ್ತ ಶಿಕ್ಷಣ ಕ್ಷೇತ್ರ ಪ್ರಧಾನ ಅಂಶಗಳಾಗಿರುವ ಜತೆಗೆ, ಇತರ 10 ವಿಷಯಗಳಿಗೆ ಪ್ರಾಧಾನ್ಯತೆ ಕೊಡಲಾಗಿದೆ. ಅವುಗಳೆಂದರೆ,

1. ಸ್ವಾತಂತ್ರ್ಯ ಚಳುವಳಿ
2. ಸಂವಿಧಾನಾತ್ಮಕ ಕರ್ತವ್ಯಗಳು
3. ರಾಷ್ಟ್ರೀಯ ವ್ಯಕ್ತಿತ್ವವನ್ನು ಪೋಷಿಸಲು ಅಗತ್ಯವಿರುವ ಅಂಶಗಳು
4. ಭಾರತದ ಸಾಂಸ್ಕೃತಿಕ ಪರಂಪರೆ
5. ಸಮಾನತೆ ಪ್ರಜಾಪ್ರಭುತ್ವ ಸಮಾಜವಾದ
6. ಗಂಡು ಹೆಣ್ಣಿನ ಸಮಾನತೆ
7. ಸಾಮಾಜಿಕ ಅಡ್ಡಿ ಆತಂಕಗಳ ನಿವಾರಣೆ
8. ಪರಿಸರ ಸಂರಕ್ಷಣೆ
9. ಸಣ್ಣ ಕುಟುಂಬಗಳ ಆಶಯ ಮತ್ತು
10. ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಿಕೊಳ್ಳುವುದು ಆಗಿದೆ.

ನಂತರದ ದಿನಗಳಲ್ಲಿ ಬಂದಂತಹ ಡಿ.ಪಿ.ಇ.ಪಿ, (ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ) ಎಸ್. ಎಸ್. ಎ (ಸರ್ವ ಶಿಕ್ಷಣ ಅಭಿಯಾನ) ಪದ್ಧತಿಗಳು ಸಾರ್ವತ್ರಿಕ ಶಿಕ್ಷಣದ ಮೂಲ ಆಶಯಗಳನ್ನು ಒಂದಲ್ಲ

ಒಂದು ರೀತಿಯಲ್ಲಿ ಸಾಕಾರಗೊಳಿಸುವಲ್ಲಿ ಪ್ರಯತ್ನಿಸಿದೆ. ಹಿಂದುಳಿದ (ಭೌಗೋಳಿಕ ಮತ್ತು ಆರ್ಥಿಕ) ವರ್ಗಗಳನ್ನು ಗುರುತಿಸಿ ಪರಿಣಾಮಕಾರಿ ಶಿಕ್ಷಣವನ್ನು ನೀಡಲು ಅಲ್ಲಿರುವ ಸಹಜ ಪರಿಸರಕ್ಕೆ ಪೂರಕವಾಗುವಂತೆ ಪಠ್ಯಕ್ರಮಗಳನ್ನು ಅಳವಡಿಸಲು ಅವಕಾಶವನ್ನು ಡಿ.ಪಿ.ಇ.ಪಿ.ಯಲ್ಲಿ ನೀಡಲಾಯಿತು. ಆನಂತರ ಜಾರಿಗೆ ಬಂದ ಎಸ್.ಎಸ್.ಎ.ಯು ಸಾರ್ವತ್ರಿಕ ದಾಖಲಾತಿ, ಸಾರ್ವತ್ರಿಕ ಹಾಜರಾತಿ ಮತ್ತು ಸಾರ್ವತ್ರಿಕ ಕಲಿಕೆ ಎಂಬ ಪ್ರಮುಖ ಆಶಯಗಳೊಂದಿಗೆ ಈ ಕೆಳಗಿನ ಮಕ್ಕಳ ಹಕ್ಕುಗಳನ್ನು ಊರ್ಜಿತಗೊಳಿಸಲು ಪ್ರಯತ್ನಿಸಿದೆ.

1. ಯಾವುದೇ ರೀತಿಯಿಂದ ಮಕ್ಕಳನ್ನು ಪ್ರತ್ಯೇಕವಾಗಿ ಅಂದರೆ ಲಿಂಗ, ಜಾತಿ, ಭಾಷೆ, ವರ್ಣ, ಪ್ರದೇಶ, ರಾಜಕೀಯ ನಿಲುವು, ಬುಡಕಟ್ಟು ಆದಿವಾಸಿ ಎಂಬ ರೀತಿಯಲ್ಲಿ ನೋಡದೆ ಎಲ್ಲರನ್ನು ಒಂದೇ ರೀತಿಯಾಗಿ ನೋಡಬೇಕೆಂಬ 2ನೇ ಪರಿಚ್ಛೇದ
2. ಯಾವುದೇ ನಿಯಮ ಕಾಯಿದೆಗಳನ್ನು ರೂಪಿಸುವಾಗ ಮಕ್ಕಳ ಲಾಲನೆ, ಪಾಲನೆ, ರಕ್ಷಣೆ ಮಕ್ಕಳ ಹಿತಾಸಕ್ತಿಯನ್ನು ಗಣನೆಗೆ ತೆಗೆದುಕೊಳ್ಳಬೇಕೆನ್ನುವ 3ನೇ ಪರಿಚ್ಛೇದ.
3. ಪ್ರತಿ ಮಗುವಿಗೂ ಬಡತನ, ಕಷ್ಟ, ನೋವು ಹಿಂಸೆಯಿಂದ ದೂರವಿದ್ದು ಸ್ವತಂತ್ರವಾಗಿ ಜೀವಿಸುವ ಹಕ್ಕು ಇದೆ ಎನ್ನುವ 6ನೆಯ ಪರಿಚ್ಛೇದ.
4. ಮಕ್ಕಳ ಅಭಿಪ್ರಾಯಗಳನ್ನು ಮುಕ್ತ ವಾತಾವರಣದಲ್ಲಿ ಮಂಡಿಸಲು ಅವಕಾಶವಾಗುವ 12ನೇ ಪರಿಚ್ಛೇದ.

ಈ ಮೇಲಿನ ಮಕ್ಕಳ ಹಕ್ಕುಗಳನ್ನು ದಕ್ಷವಾಗಿ ಊರ್ಜಿತಗೊಳಿಸುವ ಸಲುವಾಗಿ ಸರ್ವಶಿಕ್ಷಣ ಅಭಿಯಾನವು ಈ ಕೆಳಗಿನ ಅಂಶಗಳ ಯೋಜನೆಗಳನ್ನೊಳಗೊಂಡಿದೆ.

1. 2005ರೊಳಗಾಗಿ ಮರಳಿ ಬಾ ಶಾಲೆಗೆ ಅಥವಾ ಇನ್ನಾವುದೇ ಕಾರ್ಯಕ್ರಮಗಳ ಮೂಲಕ ಮಕ್ಕಳ ಸಾರ್ವತ್ರಿಕ ದಾಖಲಾತಿ.
2. 2007ರೊಳಗಾಗಿ ಅಸ್ತಿತ್ವದಲ್ಲಿರುವ ಎಲ್ಲಾ ಸಾಮಾಜಿಕ ವರ್ಗಗಳ ಅಂತರವನ್ನು ಕಡಿಮೆ ಮಾಡುವುದು.
3. ಜೀವನ ಉಪಯುಕ್ತ ಶಿಕ್ಷಣಕ್ಕೆ ಪ್ರಾಥಮಿಕ ಹಂತದಿಂದಲೇ ಒತ್ತು ನೀಡುವುದು.
4. 2007ರ ಒಳಗಾಗಿ ಲಿಂಗ ತಾರತಮ್ಯದ ಅಂತರವನ್ನು ಕಡಿಮೆ ಮಾಡುವದು.
5. 2010ರೊಳಗೆ ಸಮುದಾಯವನ್ನು ಶಾಲಾ ವ್ಯವಹಾರಗಳಲ್ಲಿ ತೊಡಗಿಸುವ ಮೂಲಕ ಅಂತರ ರಹಿತ ಗುಣಮಟ್ಟದ ಶಿಕ್ಷಣವನ್ನು ಪ್ರಾಥಮಿಕ ಮಟ್ಟದಲ್ಲಿ ನೀಡುವುದು.

ಈ ಆಶಯಗಳೊಂದಿಗೆ ಗುಣಾತ್ಮಕ ಶಿಕ್ಷಣವನ್ನು ನೀಡಲು ಸರಕಾರದೊಂದಿಗೆ ಎಲ್ಲಾ ಪ್ರಜೆಗಳ ಸಹಕಾರವು ಅಗತ್ಯವಾಗಿದೆ. ಲಿಂಗ, ಜಾತಿ, ಧರ್ಮ, ಅಂತಸ್ತುಗಳ ಅಂತರವಿಲ್ಲದ ಮೌಲ್ಯಯುಕ್ತ ಸಾಕ್ಷರ ಸಾಮಾಜದ ರೂಪೀಕರಣ ಇದರ ಹಿಂದಿರುವ ಉದ್ದೇಶ. ಅಂದರೆ ಭೌಗೋಳಿಕ, ಆರ್ಥಿಕ, ಸಾಮಾಜಿಕವಾಗಿ ಹಿಂದುಳಿದವರಿಗೂ ಶಿಕ್ಷಣವನ್ನು ತಲುಪಿಸಬೇಕಾಗುವುದು. ಆದರೆ ಭಾರತದಂತಹ ವಿಶಾಲ ದೇಶದಲ್ಲಿ ವೈವಿದ್ಯಮಯ ಭಾಷೆ, ಸಂಸ್ಕೃತಿ, ಆಚಾರಗಳು, ನಂಬಿಕೆ, ಸಂಪ್ರದಾಯಗಳಿಂದ ಬೆರೆತ ಎಲ್ಲರಿಗೂ ಈ ಆಶಯವನ್ನು ಮುಟ್ಟಿಸಲು ಸುಲಭದ ಹಾದಿ, ವಾತಾವರಣ ಇನ್ನೂ ಪ್ರಾಥಮಿಕ ಹಂತದಲ್ಲಿದೆ. ಮುಖ್ಯವಾಗಿ 'ಪ್ರತ್ಯೇಕ ಲೋಕ' ಎಂಬ ಕಲ್ಪನೆಯಿಂದಲೇ ಜೀವಿಸುತ್ತಿರುವ ಬುಡಕಟ್ಟು ಜನಾಂಗಗಳಿಗೆ ಇಂದು ಶಿಕ್ಷಣವನ್ನು ನಾವು ಪರಿಣಾಮಾತ್ಮಕವಾಗಿ ಬಿತ್ತಬೇಕಾಗಿದೆ.

**ಬುಡಕಟ್ಟು ಜನಾಂಗದಲ್ಲಿ ಶಿಕ್ಷಣ:**

ಮಾನವ ಸಮೂಹ ಅಭಿವೃದ್ಧಿಯಲ್ಲಿ ಶಿಕ್ಷಣವು ತನ್ನದೇ ಆದ ಪಾತ್ರವನ್ನು ವಹಿಸುವುದು ಅದಲ್ಲದೆ ದೇಶದ ಮಾನವ ಸಂಪನ್ಮೂಲವು ಶಿಕ್ಷಣಕ್ಕಾಗಿ ಬಳಸಲ್ಪಟ್ಟರೆ ಅದು ದೇಶದ ಮಹಾಸಂಪತ್ತಾಗಬಹುದು. ಪ್ರತೀ ಪ್ರಜೆಯು ದೇಶದ ಅಭಿವೃದ್ಧಿಗೆ ಒಂದು ಹಂತದ ಕೊಡುಗೆಯನ್ನು ನೀಡುವನು. ಆದರೆ ಆ ಕೊಡುಗೆ ಏನು ಎಂದು ನಿರ್ಧರಿಸುವಲ್ಲಿ ಶಿಕ್ಷಣದ ಪಾತ್ರವಿದೆ. ಮಾನವ ಕುಲವನ್ನು ಅತೀ ಹಿಂದುಳಿದವರು, ಅರೆ ಹಿಂದುಳಿದವರು ಮತ್ತು ಹಿಂದುಳಿದವರು ಎಂದು ವರ್ಗೀಕರಿಸುವುದಾದರೆ, ಹಿಂದುಳಿದವರು ತಮ್ಮ ಜೀವನ ಪ್ರಯಾಣವನ್ನು ಆಧುನಿಕ ಬದಲಾವಣೆ ಯುಕ್ತವಾದ ಜಗತ್ತಿನ ಕಡೆಗೆ ತಿರುಗಿಸುತ್ತಾರೆ. ತುಂಬಾ ಹಿಂದುಳಿದವರು ತಮ್ಮ ಹಿಂದಿನ ಸ್ಥಿತಿಯಲ್ಲೇ ಮುಂದುವರಿಯಲು ಇಚ್ಛಿಸುತ್ತಾರೆ.

ಯಾವುದೇ ಬದಲಾವಣೆಯ, ಅಭಿವೃದ್ಧಿಯ ಪ್ರಯತ್ನಗಳನ್ನು ಇವರು ವಿಚಿತ್ರ ದೃಷ್ಟಿಯಿಂದ ವಿರೋಧಿಸುತ್ತಾರೆ. ಅವರ ಸ್ಥಿತಿಗತಿಗಳು ನಿಶ್ಚಲ ಪ್ರಗತಿಯಲ್ಲಿರುವುದು. ಆಧುನಿಕತೆ ಮತ್ತು ಪ್ರಗತಿಯ ಬದಲಾವಣೆಯಿಂದ ಎಲ್ಲಿ ತಮ್ಮ ಮೂಲ ಸತ್ವ ಕಳೆದುಹೋಗಬಹುದೋ ಎಂಬ ಭಯ ಇವರನ್ನು ಕಾಡುವುದು. ಆದರೆ ಅರೆ ಹಿಂದುಳಿದವರು (ಸೆಮಿ–ಬ್ಯಾಕ್ವರ್ಡ್) ತಮ್ಮ ಬದಲಾವಣೆಯನ್ನು ಬಯಸುತ್ತಾರೆ ಮತ್ತು ಈ ಬದಲಾವಣೆಯನ್ನು ಶಿಕ್ಷಣದ ಮೂಲಕ ನಿರೀಕ್ಷಿಸುತ್ತಾರೆ ಎಂಬುವುದು ಇಲ್ಲಿ ಪ್ರಧಾನ. ಇಲ್ಲಿ ಬರುವ ಈ ಗುಂಪನ್ನು (ಸೆಮಿ–ಬಾಕ್ವರ್ಡ್) ನಾವು ಬುಡಕಟ್ಟು ಜನಾಂಗ, ಪರಿಶಿಷ್ಟ ಪಂಗಡ ಎಂದು ಕರೆಯಬಹುದಾಗಿದೆ. ಬುಡಕಟ್ಟು ಜನಾಂಗದ ವೈವಿಧ್ಯಮಯ ಜೀವನ ಕ್ರಮದಲ್ಲಿ (ಭಾಷೆ,ನಂಬಿಕೆ, ಸಂಪ್ರದಾಯ, ಆಚರಣೆ, ನಿಯಮಗಳು) ಇತರ ಸಮಸ್ಯೆಗಳಂತೆಯೇ ಸಮಾನ ದೃಷ್ಟಿಯಿಂದ ಶಿಕ್ಷಣವನ್ನು ಕೊಡಬೇಕಾಗಿದೆ. ಇಲ್ಲಿ ಇತರ ಸಮಸ್ಯೆಗಳಿಂದ ಭಿನ್ನವಾಗಿ ಶಿಕ್ಷಣವನ್ನು ನೋಡಿದರೆ ಅದು ಅಭಿವೃದ್ಧಿಯಲ್ಲಿ ಋಣಾತ್ಮಕ ಪರಿಣಾಮವನ್ನು ಬೀರಬಹುದು.

**ಭಾರತದಲ್ಲಿ ಬುಡಕಟ್ಟು ಶಿಕ್ಷಣ:**

1993ರಲ್ಲಿ ಮಾನವ ಹಕ್ಕುಗಳ ಆಯೋಗ ಪ್ರಕಟಿಸಿದ ಸಾಕ್ಷರತಾ ಪಟ್ಟಿಯನ್ನು ಗಮನಿಸಿದಲ್ಲಿ ಪರಿಶಿಷ್ಟ ವರ್ಗ, ಪರಿಶಿಷ್ಟ ಜಾತಿ ಮತ್ತು ಇತರ ವರ್ಗಗಳ ಶೈಕ್ಷಣಿಕ ಅಂತರದ ಅರಿವಾಗಬಹುದು.

**ಕೋಷ್ಟಕ –1.1**

**ಜನಗಣತಿ**

| ವರ್ಷ | ಅಕ್ಷರಸ್ಥರು | | | | ಅಕ್ಷರಸ್ಥರ ಅಂತರ |
|---|---|---|---|---|---|
| | ಪ.ಜಾತಿ | ಪ.ಪಂಗಡ | ಇತರೆ | ಪ.ಜಾತಿ ಅಲ್ಲದವರು | ಪ.ಪಂಗಡ ಅಲ್ಲದವರು |
| 1961 | 10.27 | 8.33 | 27.86 | 17.59 | 19.53 |
| 1971 | 14.04 | 11.30 | 33.80 | 19.76 | 22.50 |
| 1981 | 21.38 | 16.35 | 41.30 | 19.92 | 24.95 |
| 1991 | 37.41 | 29.60 | 62.25 | 24.84 | 32.65 |

ಭಾರತದ ಜನಸಂಖ್ಯೆಯ ಪ್ರತಿ 12ನೆಯ ಮಹಿಳೆ ಬುಡಕಟ್ಟು ಜನಾಂಗದವಳು ಎಂದಾದಲ್ಲಿ ಇಲ್ಲಿ ಶಿಕ್ಷಣದ ಅಗತ್ಯವನ್ನು ನಾವು ತಿಳಿಯಬಹುದಾಗಿದೆ. 1991ರಲ್ಲಿ ಬುಡಕಟ್ಟು ಜನಸಂಖ್ಯೆ 67.76 ಮಿಲಿಯದಲ್ಲಿದ್ದು (ಒಟ್ಟು ಜನಸಂಖ್ಯೆಯ ೮.೦೮ ಶೇಕಡಾ) ಅದರಲ್ಲಿ ಮಹಿಳಾ ಜನಸಂಖ್ಯೆಯೇ ಸುಮಾರು 34.36 ಮಿಲಿಯ (50.7%) ಆಗಿರುವುದೊಂದೆ ವಿಶೇಷ ಪರಿಶಿಷ್ಟ ವರ್ಗದ ಸಾಕ್ಷರತೆ ರಾಜಸ್ಥಾನದಲ್ಲಿ ಅತೀ ಕಡಿಮೆಯಿದ್ದು (4.42%) ಅತೀ ಹೆಚ್ಚು ಮಿಜೋರಾಂನಲ್ಲಿ (78.70%) ಎಂದು ದಾಖಲಾಗಿರುತ್ತದೆ. ಭಾರತದಲ್ಲಿ ಸರಾಸರಿ ಸಾಕ್ಷರತಾ ಮಟ್ಟವು 18.19 ಆಗಿದ್ದು ಇಲ್ಲಿ ಲಿಂಗಾಧಾರಿತ ವಿಶೇಷತೆಯನ್ನು ಕಾಣಬಹುದಾಗಿದೆ. ಅಂದರೆ ಮಿಜೋರಾಂ, ಕೇರಳ, ಲಕ್ಷದ್ವೀಪ, ನಾಗಲ್ಯಾಂಡ್ ಮತ್ತು ಸಿಕ್ಕಿಂ. ಈ ಐದು ರಾಜ್ಯಗಳಲ್ಲಿ ಮಹಿಳೆಯರ ಸಾಕ್ಷರತೆ 80 ಶೇಕಡಾ ಆಗಿದ್ದು ಉಳಿದ ರಾಜ್ಯಗಳಲ್ಲಿ ಅದು ಕೇವಲ 20ಶೇಕಡಾ ಆಗಿದೆ. ಬುಡಕಟ್ಟು ಪ್ರದೇಶಗಳಲ್ಲಿ ಶಿಕ್ಷಣ ಅಂದರೆ, ಅದು ಸಾಕ್ಷರತೆಗಿಂತ ಹೆಚ್ಚು ಮಹತ್ವದ್ದಾಗಿದೆ. ಅದಲ್ಲದೆ ಬುಡಕಟ್ಟಿನಲ್ಲಿ ಶಿಕ್ಷಣವು ಆಯಾ ಬುಡಕಟ್ಟಿನ ಸಂಸ್ಕೃತಿ, ಸಾಂಪ್ರದಾಯಿಕ ಕಲೆಗಳು, ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಮತ್ತು ಸಮಂಧಿಸಿದ ಪರಿಸರದೊಂದಿಗೆ ಸಂಬಂಧವನ್ನು ಹೊಂದಿದೆ. ತಮ್ಮ ಆರ್ಥಿಕ ಅನುಕೂಲತೆಗಳಿಗನುಗುಣವಾಗಿ ಸಾಮಾಜಿಕ ಸ್ವಾತಂತ್ರ್ಯಕನುಗುಣವಾಗಿ ಪ್ರತಿ ಸಮುದಾಯವು ತಮ್ಮ ಮಕ್ಕಳಿಗೆ ಯುವ ಜನಾಂಗಕ್ಕೆ ವಿದ್ಯಾಭ್ಯಾಸವನ್ನು ಕೊಡಲು ಪ್ರಯತ್ನಿಸುವುದು. ಆದ್ದರಿಂದಲೇ ಬುಡಕಟ್ಟಿನಲ್ಲಿ ಶಿಕ್ಷಣವೆಂಬುವುದು ಸಾಂಪ್ರದಾಯಿಕ ನೆಲೆಗಟ್ಟಿನಿಂದ ಪ್ರಭಾವಿತವಾಗಿರುತ್ತದೆ.

**ಬುಡಕಟ್ಟು ಜನಾಂಗದಲ್ಲಿ ಶಿಕ್ಷಣ ಸಮಸ್ಯೆಗಳು:**

ಪ್ರಾಥಮಿಕ ಮತ್ತು ಪ್ರೌಢ ವಿಭಾಗದಲ್ಲಿ ನಿಜವಾದ ತೊಂದರೆ ಕಾಣಿಸಿಕೊಳ್ಳುವುದು ಶಾಲಾ ಸೌಲಭ್ಯಗಳ ಲಭ್ಯತೆಯಲ್ಲಿ (ಅಧ್ಯಾಪಕರ ಕೊರತೆ, ಕೊಠಡಿ, ಅಥವಾ ಶಾಲಾ ಸಾಮಾಗ್ರಿಗಳ ಕೊರತೆ). ಆದರೆ ಇದಕ್ಕೆ ವಿರುದ್ಧವಾಗಿ ಬುಡಕಟ್ಟು ಜನಾಂಗದ ಶಿಕ್ಷಣವನ್ನು ಹಳ್ಳಿ ಪ್ರದೇಶಗಳಲ್ಲಿ ಪ್ರಭಾವಿಸುವ ಎರಡು ಅಂಶಗಳೆಂದರೆ, ಕ್ಷೀಣಿಸಿರುವ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಮತ್ತು ಅಂತಹ ಹಳ್ಳಿಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೂ ಪ್ರೋತ್ಸಾಹಿಸುವ ಆಡಳಿತದ ಸ್ಫೂರ್ತಿ (ವಿಲ್ ಪವರ್) ಇದು ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದಲ್ಲಿ ಪ್ರಭಾವಿಸುವುದರಿಂದ ಇಂತಹ ಪ್ರದೇಶಗಳಲ್ಲಿ ಆಶ್ರಮ ಶಾಲೆ, ಹಾಸ್ಟೆಲ್ ಶಾಲೆ ಕೆಲಮಟ್ಟಿಗೆ ಪ್ರಯೋಜನವಾಗ ಬಹುದು. ಇಂತಹ ಶಾಲೆಯಲ್ಲಿ ಮಕ್ಕಳ ಜತೆಗೆ ಅಧ್ಯಾಪಕರು ಇರುವುದರಿಂದ ನಿರಂತರ ತರಬೇತಿಯಂತೆ ಶಿಕ್ಷಣವು ಸಿಗುವುದು ಸಾಧ್ಯವಾಗಬಹುದು. ಈ ರೀತಿಯ ಭೌತಿಕ ಸಮಸ್ಯೆಗಳ ಜತೆಗೆ ಬುಡಕಟ್ಟು ಜನಾಂಗದ ಶಿಕ್ಷಣದಲ್ಲಿ ಕೆಲವು ವೈರುಧ್ಯಗಳನ್ನು ಕಾಣಬಹುದಾಗಿದೆ.

ಉದಾ: ಭಾರತದ ಬುಡಕಟ್ಟು ಜನಾಂಗ ಅವರದೇ ಆದ ಭಾಷೆ, ಸಂಸ್ಕೃತಿ, ವಿಶೇಷತೆಗಳ ಹಿನ್ನಲೆಗಳಿವೆ. ಇವುಗಳು ನಮ್ಮ ಶಿಕ್ಷಣ ಸಂಶೋಧಕರಿಗೆ ಸವಾಲಾಗಿದೆ. ಅವರಿಗೆ ಯಾವ ರೀತಿಯ ಬೋಧನೆ ಅಗತ್ಯವಿದೆ? ಯಾವ ರೀತಿಯ ಪಠ್ಯ ವಿಧಾನವನ್ನನುಸರಿಸಬೇಕು? ಯಾವ ಭಾಷೆಯಲ್ಲಿ ಪಾಠ ಮಾಡಬೇಕು? ಎಂಬುವುದು ಇನ್ನೂ ಬಗೆಹರಿಯಲಾಗದ ಗೊಂದಲಗಳಾಗಿವೆ.

**ಭಾರತದ ಬುಡಕಟ್ಟು ಜನಾಂಗದ ಶಿಕ್ಷಣ ಸಮಸ್ಯೆಯ ಸಾಮಾನ್ಯ ಲಕ್ಷಣಗಳು:**

1. ಕುಬ್ಜ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಸೌಲಭ್ಯಗಳ (ಇನ್ ಫ್ರಾಸ್ಟಕ್ಚರ್) ಸಮಸ್ಯೆ
2. ಪ್ರಾಥಮಿಕ ಹಂತ ದಾಟಿದ ಕೂಡಲೇ ಕಂಡು ಬರುವ ಅರ್ಧದಲ್ಲಿ ಶಾಲೆ ಬಿಡುವ ಸಮಸ್ಯೆ (ಅದರಲ್ಲೂ ಹೆಣ್ಣೂ ಮಕ್ಕಳ ಶಿಕ್ಷಣದಲ್ಲಿ)
3. ಭಾಷಾ ಮತ್ತು ಬೋಧನಾ ವಿಧಾನ ಅನುಸರಣೆಯಲ್ಲಿನ ಸಮಸ್ಯೆ
4. ನಿರ್ದಿಷ್ಟ ಮತ್ತು ವಿಶಿಷ್ಟವಾದ ಸಂಸ್ಕೃತಿಯನ್ನು ಹೊಂದಿರುವುದು.
5. ನಂಬಿಕೆ, ಆಚರಣೆ, ಸಂಪ್ರದಾಯಗಳಿಗೆ ಬದ್ಧಾವಾಗಿರುವ ಕುಟುಂಬ ವ್ಯವಸ್ಥೆ.
6. ಬುಡಕಟ್ಟು ಜನಾಂಗ ಪ್ರಾಮುಖ್ಯ ರಹಿತ ಎಂದು ತಿಳಿಯುವುದು.

ಇತರ ಸಮುದಾಯವನ್ನು ಹೋಲಿಸಿದಾಗ ಬುಡಕಟ್ಟು ಜನಾಂಗದ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಅಭಿವೃದ್ಧಿ ಹಿಂದುಳಿದಿದೆ. ಇದು ಪಂಗಡವನ್ನು ಮುಖ್ಯ ವಾಹಿನಿಯತ್ತ ಕೊಂಡೊಯ್ಯಲು ತಡೆಯಾಗುತ್ತದೆ. ಅಲ್ಲದೆ ಇವರಲ್ಲಿ ಇನ್ನೂ ಉಳಿದಿರುವ ಮೂಢನಂಬಿಕೆ, ಕೌಟುಂಬಿಕ ಅಸ್ತಿರತೆ, ಅಲೆದಾಟದ ಜೀವನವು ಬುಡಕಟ್ಟು ಜನಾಂಗದ ಶೈಕ್ಷಣಿಕ ದಾರಿಯಲ್ಲಿ ತಡೆಯಾಗುತ್ತದೆ. ಅತಿಯಾದ ಬಡತನದಿಂದ ಶಾಲಾ ಸಾಮಾಗ್ರಿಗಳನ್ನು ಶಿಕ್ಷಣಕ್ಕೆ ಹೊಂದಿಸಲಾಗದ ಸ್ಥಿತಿಯೂ ಇದಕ್ಕೆ ಒಂದು ಕಾರಣವಾಗಬಹುದು.

ಕೆಲವೊಂದು ನಿರ್ದಿಷ್ಟ ಪಂಗಡಗಳಲ್ಲಿ ಮನೋಜ್ಞಾನ ಸಂಬಂಧಿತವಾದ ಕಾರಣಗಳೂ ಇರಬಹುದು. ಉದಾ: ತಮಗೆ ಭದ್ರತೆ ಇಲ್ಲ ಎಂಬ ಕೀಳರಿಮೆ, ಅವರಲ್ಲಿರುವ ಕುತೂಹಲ, ಸ್ಫೂರ್ತಿ, ಆಕಾಂಕ್ಷೆ, ಶಿಕ್ಷಣದ ದೃಷ್ಟಿಕೋನವನ್ನೇ ಕ್ಷಯಿಸುವಂತೆ ಮಾಡಬಹುದು.

ಅದೇ ರೀತಿಯಲ್ಲಿ ಶಾಲಾ ಕಟ್ಟಡ, ಅಧ್ಯಯನ ಸಾಮಾಗ್ರಿಗಳ ಕೊರತೆ, ಅಧ್ಯಾಪಕರ ಗುಣಮಟ್ಟ, ಬುಡಕಟ್ಟು ಮಕ್ಕಳಿಗೆ ಅನ್ವಯವಾದ ಬೋಧನಾ ವಿಧಾನ ತರಬೇತಿಯ ಕೊರತೆ, ಆಡಳಿತಾತ್ಮಕ ಸಮಸ್ಯೆಗಳಾಗಿವೆ. ಗುಣಾತ್ಮಕವಲ್ಲದ ಪಾಠಗಳು, ಬೋಧನಾ ಭಾಷೆಯ ಅಳವಡಿಕೆ, ಬುಡಕಟ್ಟು ಪಂಗಡಕ್ಕೆ ವ್ಯತಿರಿಕ್ತವಾಗಿರುವ ಪಠ್ಯ ಭಾಷೆ ವಿಧಾನಗಳು, ಅಸಮರ್ಪಕವಾದ ಮಕ್ಕಳ ಶಿಕ್ಷಕರ ನಿಷ್ಪತಿ ಇತ್ಯಾದಿಗಳು ಮಧ್ಯದಲ್ಲಿ ಶಾಲೆ ಬಿಡುವ ಸಮಸ್ಯೆಗೆ ಕಾರಣವಾಗುವುದು.

ಇದೇ ರೀತಿಯಲ್ಲಿ ಇರುವ ವ್ಯವಸ್ಥೆಯು ಶಿಕ್ಷಕರಿಗೆ ಹೊಂದಾಣಿಕೆ ಆಗದಿರುವುದು, ಬುಡಕಟ್ಟು ಪಂಗಡಕ್ಕೆ ಬೋಧನೆ ಮಾಡಲು ಅಗತ್ಯವಿರುವ ತರಬೇತಿ ಶಿಕ್ಷಕರಿಗೆ ಸಿಗದಿರುವುದು, ಆಯಾ ಸಮುದಾಯದವರೇ ಆದ ಅಧ್ಯಾಪಕರ ಕೊರತೆ, ಅಧ್ಯಾಪಕರು ಮತ್ತು ರಕ್ಷಕರಲ್ಲಿ ಬುಡಕಟ್ಟು ಶಿಕ್ಷಣದ ಬಗ್ಗೆ ಇರುವ ವ್ಯತ್ಯಾಸ ಅರಿವು ಮತ್ತು ಮನೋಭಾವನೆ, ಅನ್ಯ ಜಾತಿಯ ಶಿಕ್ಷಕರಿಗೆ ಬುಡಕಟ್ಟಿನ ಮಕ್ಕಳ ಹಿನ್ನಲೆಗಳ ಅರಿವಿಲ್ಲದಿರುವುದರಿಂದ ಉಂಟಾಗುವ ಅಸಡ್ಡೆ ಇತ್ಯಾದಿಗಳು ಕೂಡ ಬುಡಕಟ್ಟಿನಲ್ಲಿ ಶಿಕ್ಷಣದ ಸಮಸ್ಯೆಯನ್ನು ಹುಟ್ಟು ಹಾಕುವದು. ಇಲ್ಲಿ ಸಂವಿಧಾನಾತ್ಮಕವಾಗಿ ಕೆಲವು ವಿಶೇಷ ರಿಯಾಯತಿ ಮತ್ತು ಯೋಜನೆಗಳು ಇದ್ದರೂ ಅದು ಸಮುದಾಯವನ್ನು ಸರಿಯಾಗಿ ತಲುಪುತ್ತಿಲ್ಲ.

ಆದ್ದರಿಂದಲೇ ಇರುವ ಯೋಜನೆಗಳ ಸದ್ಬಳಕೆಯ ಜತೆಗೆ, ಆಶ್ರಮ ಶಾಲೆ, ಶಾಲಾ ಪರಿಸರ, ಮೇಲ್ವಿಚಾರಣೆ ಮತ್ತು ಅವಲೋಕನ, ಹೆಣ್ಣು ಮಕ್ಕಳಿಗೆ ಹಾಸ್ಟೆಲ್, ಶೈಕ್ಷಣಿಕ ಸೌಲಭ್ಯಗಳು, ಉಚಿತ ಪುಸ್ತಕಗಳು ಶಿಕ್ಷಕರಿಗೆ ವಿಶೇಷ ತರಬೇತಿ ಮತ್ತು ಶಿಕ್ಷಣವನ್ನು ಮಾನವ ಹಕ್ಕಾಗಿ ಗಣನೆಗೆ ತೆಗೆದುಕೊಳ್ಳಬೇಕಾದ ಅಗತ್ಯ ಇತ್ಯಾದಿ ಪರಿಣಾಮಕಾರಿ ಬದಲಾವಣೆಗಳು ಇಂದು ಬುಡಕಟ್ಟು ಶಿಕ್ಷಣ ಕ್ಷೇತ್ರದಲ್ಲಿ ಬರಬೇಕಾಗಿದೆ.

**ಸಂವಿಧಾನದಲ್ಲಿ ಬುಡಕಟ್ಟು ಸಮುದಾಯದ ಉಲ್ಲೇಖಗಳು:**

ಭಾರತದಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯಗಳನ್ನು ಗುರುತಿಸಿ, ಅವರ ಬಗ್ಗೆ ಅಧ್ಯಯನ ಮಾಡಿ, ಅವರಲ್ಲಿರುವ ಅಸಮಾನತೆ ಮತ್ತು ಹಿಂದುಳಿಯುವಿಕೆಯನ್ನು ತೊಡೆದು ಹಾಕಲು ಯೋಜನೆಗಳನ್ನು ಕೈಗೊಳ್ಳಲು ಭಾರತದ ಸಂವಿಧಾನವು ಅವಕಾಶವನ್ನು ಕಲ್ಪಿಸುವುದು.

1. ಸಂವಿಧಾನದ 341 ಮತ್ತು 342ನೆಯ ಕಲಂ 'ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಪಟ್ಟಿ' ಎಂದೇ ಕರೆಯಲ್ಪಡುತ್ತಿದ್ದು ಐತಿಹಾಸಿಕ ಸಾಮಾಜಿಕ ಹಿಂದುಳಿದವರಿಗೆ ಸಂಬಂಧಿಸಿ ಮಾಹಿತಿಯನ್ನು ನೀಡುವುದು.

2. ಸಂವಿಧಾನದ 242(1)ರ ಕಲಮಿನ ಪ್ರಕಾರ ಎಲ್ಲಾ ರೀತಿಯಿಂದ ಹಿಂದುಳಿದ ಅರ್ಹ ಸಮುದಾಯಗಳನ್ನು ಅನುಸೂಚಿತ ಬುಡಕಟ್ಟುಗಳೆಂದು ಪರಿಗಣಿಸಿ ಅವರಿಗೆ ಮೀಸಲಾತಿ ಕಲ್ಪಿಸುವ ಅವಕಾಶವನ್ನು ರಾಷ್ಟ್ರಪತಿಗಳಿಗೆ ನೀಡುವುದು. ಈ ರೀತಿ ಪರಿಗಣಿಸಲ್ಪಟ್ಟ ಬುಡಕಟ್ಟು ಜನಾಂಗಗಳು ಸಂವಿಧಾನ ಬದ್ದ ಅವಕಾಶ ಮತ್ತು ಸೌಲಭ್ಯಗಳನ್ನು ಪಡೆಯುವುದು.
3. ಸಂವಿಧಾನದ 46ನೆಯ ಅನುಚ್ಛೇದವು ಬುಡಕಟ್ಟುಗಳ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸುವ ಜೊತೆಗೆ ಸಾಮಾಜಿಕ ನ್ಯಾಯ ನೀಡುವಂತೆ ನೋಡಿಕೊಂಡು ಶೋಷಣೆ ರಹಿತ ಜೀವನದ ಅವಕಾಶವನ್ನು ರಾಜ್ಯ ಸರಕಾರ ಕಲ್ಪಿಸಬೇಕೆಂದು ತಿಳಿಸುತ್ತದೆ.
4. ಕಲಂ 244ರ ಪ್ರಕಾರ ಹೆಚ್ಚಿನ ಸಂಖ್ಯೆಯಲ್ಲಿ ಒಂದು ಪ್ರದೇಶದಲ್ಲಿ ಸೀಮಿತವಾಗಿ ವಾಸಿಸುತ್ತಿದ್ದರೆ ಆ ಪ್ರದೇಶಗಳನ್ನು 'ಅನುಸೂಚಿತ ಪ್ರದೇಶ' ಎಂದು ಗುರುತಿಸುವ ಅವಕಾಶವನ್ನು ಎಲ್ಲಾ ರಾಜ್ಯದ ರಾಜ್ಯಪಾಲರಿಗೆ ನೀಡುವುದು.
5. ಅನುಚ್ಛೇದ 399ರಂತೆ ರಾಜ್ಯ ಸರಕಾರಗಳು ರಾಜ್ಯದ ಅನುಸೂಚಿತ ಬುಡಕಟ್ಟುಗಳ ಕಲ್ಯಾಣಕ್ಕೆ ಅಗತ್ಯವಾದ ನಿರ್ದಿಷ್ಟ ಯೋಜನೆಗಳನ್ನು ಕಾರ್ಯಗತಗೊಳಿಸಬಹುದಾಗಿದೆ.
6. ಸಂವಿಧಾನ 275ನೇ ಅನುಚ್ಛೇದವು ಸಂವಿಧಾನದ ಸವಲತ್ತುಗಳನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರಗಳಿಗೆ ಸಹಾಯವನ್ನು ನೀಡುವ ಅವಕಾಶವನ್ನು ನೀಡುವುದು.
7. ಕಲಂ 330,332 ಮತ್ತು 334ರ ಪ್ರಕಾರ ಬುಡಕಟ್ಟು ಜನಾಂಗಗಳಿಗೆ ರಾಜ್ಯ ವಿಧಾನ ಸಭೆಗಳಲ್ಲಿ ಮೀಸಲಾತಿ.
8. ಕಲ 335ರ ಪ್ರಕಾರ ಅನುಸೂಚಿತ ಬುಡಕಟ್ಟುಗಳ ನಾಗರಿಕ ಸೇವೆಗಳಲ್ಲಿ ಮೀಸಲಾತಿ.
9. ಕಲಂ 15,16,19,ರಂತೆ ಬುಡಕಟ್ಟುಗಳ ಜೀವನ ಮತ್ತು ಹಿತಾಸಕ್ತಿಗಳನ್ನು ಕಾಪಾಡುವ ಹೊಣೆ.
10. ಸಂವಿಧಾನದ 5ನೇ ಪಟ್ಟಿಯ 'ಬಿ' ಭಾಗದ 4ನೇ ಪ್ಯಾರಾದಲ್ಲಿ ಪ್ರತಿಯೊಂದು ರಾಜ್ಯವು ಬುಡಕಟ್ಟು ಪ್ರದೇಶ ಇದ್ದರೂ ಇಲ್ಲದಿದ್ದರೂ ಕಡ್ಡಾಯವಾಗಿ ಅನುಸೂಚಿತ ಬುಡಕಟ್ಟುಗಳನ್ನೊಳಗೊಂಡ ಬುಡಕಟ್ಟು ಸಲಹಾ ಸಮಿತಿಯನ್ನು ರಚಿಸುವ ಅವಕಾಶವನ್ನು ರಾಜ್ಯಗಳಿಗೆ ನೀಡುವದು.
11. ಅನುಚ್ಛೇದ 338ರ ಪ್ರಕಾರ ಬುಡಕಟ್ಟುಗಳ ಅಭಿವೃದ್ಧಿ ಮತ್ತು ಹಿತಾಸಕ್ತಿಗಳಿಗೆ ಆಯುಕ್ತರವನ್ನು ನೇಮಿಸುವದು.

**ಸಮಸ್ಯೀಕರಣ**

ಶಾಲಾ ಸೌಲಭ್ಯಗಳ ಅಲಭ್ಯತೆಯಿಂದ ಪ್ರಾಥಮಿಕ ಮತ್ತು ಪ್ರೌಢ ವಿಭಾಗದಲ್ಲಿ ನಿಜವಾದ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಆದರೆ ಕೊರಗರಲ್ಲಿ ಇದಕ್ಕೆ ವಿರುದ್ಧವಾಗಿ ಎನ್ನುವಂತೆ ಶಿಕ್ಷಣದ ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ. ಕೊರಗರಿಗೆ ಶಿಕ್ಷಣವನ್ನು ಪಡೆದುಕೊಳ್ಳಲು ಕುಟುಂಬದ ಸದಸ್ಯರ ಬೆಂಬಲ ಇರುವುದಿಲ್ಲ. ಇದು ಒಂದು ಕಾರಣವಾದರೆ, ಸಮಾಜದಲ್ಲಿ ಅವರನ್ನು ಅತ್ಯಂತ ಕೀಳರಿಮೆಯಿಂದ ಕಾಣುವ ಜನರು ಹೀಯಾಳಿಸುವುದು ಮತ್ತೊಂದು ಕಾರಣವಾಗಿದೆ.

**ಕೊರಗರ ಶಿಕ್ಷಣ ಸಮಸ್ಯೆಯ ಸಾಮಾನ್ಯ ಲಕ್ಷಣಗಳು:**

1. ಸಾಧಾರಣವಾಗಿ ಹಳ್ಳಿಯಲ್ಲಿ ಇರುವ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳ ಸಮಸ್ಯೆ.
2. ಪ್ರಾಥಮಿಕ ಹಂತ ದಾಟಿದ ಕೂಡಲೇ ಮಕ್ಕಳು ಶಾಲೆ ಬಿಡುವ ಸಮಸ್ಯೆ. ಪ್ರಮುಖವಾಗಿ ಹೆಣ್ಣು ಮಕ್ಕಳ ವಿಷಯದಲ್ಲಿ ಇದು ಒಂದು ಸಮಸ್ಯೆಯಾಗಿದೆ.
3. ಕೆಲವೊಮ್ಮೆ ಭಾಷೆ ಮತ್ತು ಬೋಧನಾ ವಿಧಾನಗಳು ಸಮಸ್ಯೆಯಾಗಬಹುದು. ಏಕೆಂದರೆ ಮಾತೃಭಾಷೆ ಬೇರೆಯಾಗಿದ್ದು ಪಡೆಯುವ ಶಿಕ್ಷಣ ಬೇರೆ ಭಾಷೆಯಾದಾಗಿದ್ದರಿಂದ ಅವರು ಅದನ್ನು ಅರ್ಥೈಸಿಕೊಳ್ಳಲಾಗುವುದಿಲ್ಲ.
4. ಕೊರಗರಿಗೆ ತಮ್ಮದೇ ಆದ ನಂಬಿಕೆ, ಆಚರಣೆ, ಸಂಪ್ರದಾಯಗಳಿರುವುದರಿಂದ ಅದು ಶಿಕ್ಷಣಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ.

ಕೊರಗರಲ್ಲಿರುವ ಅಜಲು ಪದ್ಧತಿಯಿಂದ ಅಶಿಕ್ಷಿತರಾದ ಕುರಿತು ಅಲೋಚಿಸಲು ಸಾಧ್ಯವಾಗುತ್ತಿಲ್ಲ. ಈ ಪದ್ಧತಿಯನ್ನು ನಿರ್ವಹಿಸುವ ಕುಟುಂಬದ ಮಕ್ಕಳು ಪ್ರತಿದಿನ ತಮ್ಮ ಹೆತ್ತವರು ಬೇಡುವ, ನಡೆಯುವ ಹಾಗೂ ಅಮಲಿನ ವರ್ತನೆಯನ್ನು ವೀಕ್ಷಿಸುತ್ತಿರುತ್ತಾರೆ. ಅವರ ವರ್ತನೆಯನ್ನು ಮಕ್ಕಳು ಅನುಕರಿಸುತ್ತಾರೆ. ಆದುದರಿಂದ ಮಕ್ಕಳಿಗೆ ಶಿಕ್ಷಣದಲ್ಲಿ ಆಸಕ್ತಿ ಇರುವುದಿಲ್ಲ. ಅದಕ್ಕಾಗಿ ಅವರು ಪ್ರಾಥಮಿಕ ಶಿಕ್ಷಣದಲ್ಲಿ ಪರದಾಡಬೇಕಾಗುತ್ತದೆ. ನೂರಕ್ಕೆ 5-6 ಮಕ್ಕಳು ಪ್ರೌಢಶಾಲಾ ಹಂತವನ್ನು ದಾಟಲು ಸಾಧ್ಯವಾಗುತ್ತಿಲ್ಲ. ಕೊರಗರು ಎದುರಿಸುತ್ತಿರುವ ಇನ್ನೊಂದು ಸಮಸ್ಯೆ ವಿದ್ಯೆಯನ್ನು ಕೊಡುತ್ತಿರುವ ಶಿಕ್ಷಕರು ಮತ್ತು ಸಹಪಾಠಿಗಳು ಹೀಯಾಳಿಸುವುದರಿಂದ ಶಿಕ್ಷಣ ನಮಗಲ್ಲಾ ಎನ್ನುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ.

ಕೊರಗರು ಆರ್ಥಿಕವಾಗಿ ಹಿಂದುಳಿದಿದ್ದರಿಂದ ಶಿಕ್ಷಣಕ್ಕೆ ಸಮಸ್ಯೆಯಾಗಿದೆ. ಅವರು ತಮ್ಮ ಮೂಲಭೂತ ಸೌಕರ್ಯಗಳನ್ನು ಪೂರೈಸಿಕೊಳ್ಳುವುದೇ ಕಷ್ಟಕರವಾದಾಗ ಶಿಕ್ಷಣ ಪಡೆಯುವುದು ದೂರದ ಮಾತು. ಕೊರಗರಿಗೆ ಗುಣಾತ್ಮಕ ಶಿಕ್ಷಣ ಸಿಗದೇ ಇರುವುದು ಒಂದು ಸಮಸ್ಯೆಯಾಗಿದೆ. ಏಕೆಂದರೆ ಕೊರಗರ

ಶಾಲೆಯಲ್ಲಿ ಶಿಕ್ಷಕರ ಕೊರತೆ ಹೆಚ್ಚಾಗಿರುತ್ತದೆ. ಯಾವುದೇ ಸೌಲಭ್ಯಗಳಿಲ್ಲದ ಕಡೆಗೆ ಶಿಕ್ಷಕರು ಹೋಗಲು ಇಷ್ಟ ಪಡುವುದಿಲ್ಲ. ಶಿಕ್ಷಣದಲ್ಲಿ ಅತ್ಯಂತ ಹಿಂದುಳಿದ ಕೊರಗರ ವಸತಿ ಶಾಲೆಗಳಲ್ಲಿ ಶಿಕ್ಷಕರಾಗಿ ದುಡಿಯಲು ಹೆಚ್ಚಿನವರು ಇಷ್ಟ ಪಡುವುದಿಲ್ಲ. ಅವರಲ್ಲಿ ಒಬ್ಬರಾಗಿ ಮತ್ತು ಅವರೊಟ್ಟಿಗೆ ಬೆರೆತು ಶಿಕ್ಷಣ ನೀಡುವ ಶಿಕ್ಷಕರ ಅಗತ್ಯ ಅವರಿಗಿದೆ. ಕೊರಗರಲ್ಲಿ ಪದವಿಯನ್ನು ಪಡೆದು ಶಿಕ್ಷಕರಾದವರ ಸಂಖ್ಯೆ ತುಂಬಾ ಕಡಿಮೆ.

ಪೋಷಕರು ಅನಕ್ಷರಸ್ಥರಾಗಿದ್ದರಿಂದ ಮಕ್ಕಳು ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುವುದಿಲ್ಲ. ಆದ್ದರಿಂದ ಶಾಲೆಯನ್ನು ಮಧ್ಯದಲ್ಲಿ ಬಿಡುವುದು ಕೊರಗರಲ್ಲಿ ಸಾಮಾನ್ಯವಾಗಿದೆ. ಹೆಚ್ಚಿನವರು ಪ್ರಾಥಮಿಕ ಶಿಕ್ಷಣ ಮುಗಿಸಿ ಮನೆಯಲ್ಲಿರುತ್ತಾರೆ. ಶಿಕ್ಷಣಕ್ಕೆ ಭಾಷೆಯು ಒಂದು ಸಮಸ್ಯೆಯಾಗುವುದು ಮಂಗಳೂರಿನಲ್ಲಿರುವ ಕೊರಗರು ಸಾಧಾರಣವಾಗಿ ತುಳುವಿನಲ್ಲಿ ಮಾತನಾಡುತ್ತಾರೆ. ಆದರೆ ಅವರಿಗೆ ಅವರದ್ದೇ ಆದ ಬೇರೆ ಭಾಷೆ ಇದೆ. ಆದರೆ ಅವರು ಪಡೆಯುವ ಶಿಕ್ಷಣ ಕನ್ನಡದಲ್ಲಿ ಇರುವುದರಿಂದ ಶಿಕ್ಷಣ ತಲೆಗೆ ಹಿಡಿಯುವುದಿಲ್ಲ. ಅವರಿಗೆ ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗುವುದಿಲ್ಲ. ಆದ್ದರಿಂದ ಕಲಿಯುವುದರಲ್ಲಿ ಹಿಂದುಳಿಯುತ್ತಾರೆ. ಇವರನ್ನು ಭೋದಿಸುವ ಶಿಕ್ಷಕರಿಗೆ ಸರಿಯಾದ ತರಬೇತಿ ಇರುವುದಿಲ್ಲ. ಆದ್ದರಿಂದ ಭೋದಿಸುವುದು ತುಂಬಾ ಕಷ್ಟವಾಗುತ್ತದೆ.

ಇವರಲ್ಲಿ ಕೆಲವು ಪಂಗಡಗಳು ಅಲೆಮಾರಿಗಳಾಗಿರುವುದರಿಂದ ಶಿಕ್ಷಣಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಒಂದೇ ಪ್ರದೇಶದಲ್ಲಿ ನೆಲೆಸದೆ ಬೇರೆ ಬೇರೆ ಕಡೆ ಅಲೆದಾಡುವುದರಿಂದ ಅವರು ಶಿಕ್ಷಣವನ್ನು ಪಡೆಯುವುದಿಲ್ಲ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೊರಗರ ಶಿಕ್ಷಣಕ್ಕೆ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿವೆ. ಆದರೂ ಅವುಗಳು ಅವರಿಗೆ ತಲುಪದೇ ಇರುವುದು ಮತ್ತೊಂದು ಸಮಸ್ಯೆಯಾಗಿದೆ. ಕೊರಗರ ಸಾಕ್ಷರತೆಯ ಪ್ರಮಾಣ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳಲ್ಲಿ ತುಂಬಾ ಕಡಿಮೆ. ಕಾರಣ ಹೆಚ್ಚು ವಿದ್ಯೆ ಪಡೆದರೆ ವರ ಸಿಗುವುದು ಕಷ್ಟ ಎಂಬುದಾಗಿದೆ. ಆದ್ದರಿಂದ ಅವರ ಸಾಕ್ಷರತೆ ಪ್ರಮಾಣ ಹುಡುಗರಿಗಿಂತ ಕಡಿಮೆ ಇದೆ. ಕೊರಗರ ಇಂತಹ ಅನೇಕ ಸಮಸ್ಯೆಗಳು ಶಿಕ್ಷಣ ಸಂಶೋಧಕರಿಗೆ ಸವಾಲಾಗಿದೆ. ಅವರಿಗೆ ಯಾವ ಭಾಷೆಯಲ್ಲಿ ಕಲಿಸಬೇಕು? ಹೇಗೆ ಕಲಿಸಬೇಕು? ಯಾವ ಪಠ್ಯಕ್ರಮವನ್ನು ಅನುಸರಿಸಬೇಕು ಎಂಬುದು ಗೊಂದಲಗಳಿವೆ.

**ಅಧ್ಯಯನದ ಉದ್ದೇಶಗಳು: ಕೆಳಗಿನವುಗಳು ಪ್ರಸ್ತುತ ಸಂಶೋಧನೆಯ ನಿರ್ದಿಷ್ಟ ಉದ್ದೇಶಗಳಾಗಿವೆ**

1. ಕೊರಗ ಬುಡಕಟ್ಟು ಜನಾಂಗದ ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳನ್ನು ಅರಿತುಕೊಳ್ಳುವದು
2. ಕೊರಗರ ಶೈಕ್ಷಣಿಕ ಸ್ಥಾನಮಾನವನ್ನು ತಿಳಿದುಕೊಳ್ಳುವದು
3. ಕೊರಗರಲ್ಲಿ ಶೈಕ್ಷಣಿಕ ಚಲನೆಯನ್ನು ಪರಿಶೀಲಿಸುವರು.

**ಅಧ್ಯಯನದ ವಿಧಾನಗಳು:**

ಕರಾವಳಿ ಪ್ರದೇಶದಲ್ಲಿ ಕೊರಗರು ಅತೀ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಆದ್ದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕನ್ನು ಅಧ್ಯಯನದ ವಿಷಯವನ್ನಾಗಿ ಆರಿಸಿಕೊಳ್ಳಲಾಗಿದೆ. ಪ್ರಸ್ತುತ ಮಂಗಳೂರು ಗ್ರಾಮಾಂತರ ತಾಲೂಕಿನ ಕೊರಗರ ಶೈಕ್ಷಣಿಕ ಚಲನೆಯನ್ನು ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ. ಮಧ್ಯ, ಸೂರಿಂಜೆ, ಬಜ್ಪೆ, ಕೃಷ್ಣಾಪುರ, ವಾಮಂಜೂರು, ಹಳೆಯಂಗಡಿ, ಕಿನ್ನಿಗೋಳಿ ಮುಂತಾದ ಪ್ರದೇಶಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಯಿತು.

**ಮಾಹಿತಿಯನ್ನು ಈ ಕೆಳಗಿನಂತೆ ಸಂಗ್ರಹಿಸಲಾಯಿತು:**

1. ಕ್ಷೇತ್ರ ಶಿಕ್ಷಣಾದಿಕಾರಿಗಳ ಕಛೇರಿ, ಮಣ್ಣಗುಡ್ಡ, ಮಂಗಳೂರು ತಾಲೂಕು ವಲಯ, ಮಂಗಳೂರು ಇಲ್ಲಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಯಿತು.
2. ಯೋಜನಾ ಸಮನ್ವಯ ಅಧಿಕಾರಿಗಳು, ಗಿರಿಜನ ಸಮಗ್ರ ಅಭಿವೃದ್ಧಿ ಇಲಾಖೆ, ಅಬ್ಬಕ್ಕ ನಗರ, ಕೊಟ್ಟಾರ, ಮಂಗಳೂರು, ಇಲ್ಲಿಗೆ ಬೇಟಿ ನೀಡಲಾಯಿತು.
3. ಸರ್ಕಾರೇತರ ಸಂಸ್ಥೆಗಳಿಗೆ ಭೇಟಿ ನೀಡಿ ಕೊರಗರಿಗೆ ನೀಡುವ ತರಬೇತಿ ಮತ್ತು ಸೌಲಭ್ಯಗಳ ಬಗ್ಗೆ ವಿಷಯಗಳನ್ನು ತಿಳಿದುಕೊಳ್ಳಲಾಯಿತು.
4. ಕೊರಗರಿಗಾಗಿ ಸ್ಥಾಪಿಸಲಾಗಿರುವ "ಕೇಂದ್ರಿಯ ಮಾದರಿ ವಸತಿ ಶಾಲೆ" ಮಧ್ಯ- ಚೇಳ್ಯಾರು ಮತ್ತು ಇತರ ಶಾಲೆಗಳಿಗೆ ಭೇಟಿ ನೀಡಿ ಒಟ್ಟು ಶಿಕ್ಷಣ ಪಡೆಯುತ್ತಿರುವ ಮಕ್ಕಳು ಮತ್ತು ಅವರ ಶೈಕ್ಷಣಿಕ ಮಟ್ಟದ ಬಗ್ಗೆ ಶಿಕ್ಷಕರೊಟ್ಟಿಗೆ ಚರ್ಚಿಸಲಾಯಿತು.
5. ದಕ್ಷಿಣಕನ್ನಡ ಜಿಲ್ಲಾಡಳಿತ ಮತ್ತು ದ.ಕ. ಜಿಲ್ಲಾ ಪಂಚಾಯತ್ ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ ಮಂಗಳೂರು ಮತ್ತು ಕೊರಗ ಅಭಿವೃದ್ಧಿ ಸಂಘಗಳು ಇವರ ಆಶ್ರಯದಲ್ಲಿ ಬೇಸಿಗೆ ರಜಾ ಶಿಬಿರ ಮತ್ತು ಮಕ್ಕಳ ಸಾಂಸ್ಕೃತಿಕ ಕೂಟವನ್ನು ಬೇಸಿಗೆ ರಜೆಯಲ್ಲಿ ನಡೆಸಲಾಗುತ್ತದೆ. ಇದರಲ್ಲಿ ಸಂಗೀತ, ನೃತ್ಯ, ಚಿತ್ರಕಲೆ ಮುಂತಾದವುಗಳನ್ನು ಕೊರಗರ ಮಕ್ಕಳಿಗೆ ಕಲಿಸಲಾಗುತ್ತದೆ ಅಂತಹ ಸ್ಥಳಗಳಿಗೆ ಭೇಟಿ ನೀಡಿ, ವಿದ್ಯಾರ್ಥಿಗಳೊಂದಿಗೆ ಚರ್ಚಿಸಿ ಅವರ ಶಿಕ್ಷಣದ ಮಟ್ಟ ಮತ್ತು ಇಂತಹ ಶಿಬಿರಗಳಿಂದ ಆಗುವ ಅನುಕೂಲತೆಗಳ ಬಗ್ಗೆ ತಿಳಿದುಕೊಳ್ಳಲಾಯಿತು.
6. ಕೊರಗ ಸಮುದಾಯದ 105 ಮನೆಗಳಿಗೆ ಭೇಟಿ ನೀಡಿ ಪೋಷಕರಿಂದ (30 ಗಂಡು ಮತ್ತು 75 ಹೆಣ್ಣು) ಅವರಿಗೆ ಅರ್ಥವಾಗುವ ಭಾಷೆಯಲ್ಲಿ (ತುಳು) ಒಂದೊಂದು ಮನೆಯಲ್ಲಿ ಎರಡು ಗಂಟೆಗಳ ಕಾಲ ಚರ್ಚಿಸಿ ವಿಷಯವನ್ನು ಸಂಗ್ರಹಿಸಲಾಯಿತು ಪ್ರತಿಯೊಂದು ಪೋಷಕನಿಗೆ ಪ್ರತ್ಯೇಕ ಪ್ರಶ್ನಾವಳಿ ಇದ್ದು, ಪ್ರತಿಯೊಂದು ಕೂಡ ವಿಷಯಾಧಾರಿತವಾಗಿ ವರ್ಗೀಕರಿಸಲಾಗಿದೆ. ಶೇ 95 ಪ್ರಶ್ನೆಗಳು

ನಿರ್ಧಿಷ್ಟ ಮತ್ತು ಸ್ಪಷ್ಟ ಉತ್ತರ ಹೊಂದಿದ್ದು, ಉಳಿದ 5% ಪ್ರಶ್ನೆಗಳು ಒಂದು ಅಥವಾ ಎರಡು ವಾಕ್ಯದ ಉತ್ತರವನ್ನು ಹೊಂದಿರುವುವು. ಪ್ರಶ್ನೆಗಳು ಅರ್ಥವಾಗದೇ ಇದ್ದ ಸಂದರ್ಭದಲ್ಲಿ, ಪ್ರಶ್ನೆಗಳ ಶೈಲಿಯನ್ನು ಬದಲಾಯಿಸಿ ಪ್ರಶ್ನೆಗಳಿಗೆ ಉತ್ತರವನ್ನು ಪಡೆಯಲಾಯಿತು.

ಕ್ಷೇತ್ರ ಕಾರ್ಯದಲ್ಲಿ ಸಂಶೋಧಕನು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು.

1. ಸಂಶೋಧಕನು ಹೊಸ ವ್ಯಕ್ತಿಯಾದ್ದರಿಂದ ಅವರೊಂದಿಗೆ ಮಾತನಾಡಲು ಪೋಷಕರು ಹಿಂಜರಿದರು. ಅದನ್ನು ಅರಿತ ಸಂಶೋಧಕ ಅವರಿಗೆ ಪರಿಚಯವಿರುವ ವ್ಯಕ್ತಿಯನ್ನು ಸಂದರ್ಶನಕ್ಕೆ ಬಳಸಿಕೊಳ್ಳಲಾಯಿತು.
2. ಕೆಲವು ಪ್ರಶ್ನೆಗಳಿಗೆ ಪೋಷಕರು ಮನ:ಪೂರ್ವಕವಾಗಿ ಉತ್ತರ ನೀಡದೇ ಇದ್ದುದು ಸಂಶೋಧಕನಿಗೆ ಒಂದು ಸಮಸ್ಯೆಯಾಯಿತು. ಇದು ಕೇವಲ ಅಧ್ಯಯನಕ್ಕಾಗಿ ಮತ್ತು ಸಮುದಾಯದ ಅಭಿವೃದ್ಧಿಗೆ ಅನುಕೂಲವಾಗುತ್ತದೆ ಎಂದು ತಿಳಿಸಿದಾಗ ಮುಕ್ತ ಮನಸ್ಸಿನಿಂದ ಉತ್ತರಿಸಿದರು.
3. ಪೋಷಕರು ಹೆಚ್ಚಿನವರು ಕಡಿಮೆ ಶಿಕ್ಷಣ ಹೊಂದಿದವರಾದ್ದರಿಂದ ಉತ್ತರವನ್ನು ಸಂಗ್ರಹಿಸಲು ಕಷ್ಟವಾಯಿತು.
4. ಕೆಲವೊಂದು ಮನೆಗಳಲ್ಲಿ ಪೋಷಕರು ಹೊರಗೆ ಬರಲು ಹಿಂಜರಿಯುತ್ತಿದ್ದರು.
5. ಅನೇಕ ಸಂಶೋಧಕರು ಬಂದು ಹಲವಾರು ಮಾಹಿತಿಗಳನ್ನು ನಮ್ಮಿಂದ ಸಂಗ್ರಹಿಸಿಕೊಂಡು ಹೋದರೂ, ನಮ್ಮ ಸಮುದಾಯದ ಸಮಸ್ಯೆಗಳು ಇನ್ನೂ ಹಾಗೇ ಇವೆ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು.
6. ಇಂತಹ ಅನೇಕ ಸಮಸ್ಯೆ ಸಂಶೋಧಕ ಎದುರಿಸಿದರೂ, ಹಲವು ಜನ ಪೋಷಕರು ಸಂಶೋಧಕನಿಗೆ ಉತ್ತಮ ಸಹಕಾರ ನೀಡಿದರು.
7. ಸಮುದಾಯದ ಬಗ್ಗೆ ಹೆಚ್ಚು ಅನುಭವ ಮತ್ತು ಕಾಳಜಿ ಇರುವ ಸಾಮಾಜಿಕ ಕಾರ್ಯಕರ್ತರನ್ನು ಭೇಟಿ ಮಾಡಿ ಶೈಕ್ಷಣಿಕ ಚಲನೆಯ ಬಗ್ಗೆ ವಿಷಯ ಸಂಗ್ರಹಿಸಲಾಯಿತು.

ಕ್ಷೇತ್ರ ಕಾರ್ಯದ ನಂತರ ಮಾಹಿತಿ ಸಂಗ್ರಹಣೆಯನ್ನು ಅವಶ್ಯಕತೆಗೆ ಅನುಗುಣವಾಗಿ ಅಂಕಿ ಸಂಖ್ಯೆಗಳು ಮತ್ತು ಕೋಷ್ಟಕಗಳನ್ನು ಬಳಸಲಾಯಿತು. ಅಲ್ಲದೇ ಪೂರಕವಾದ ಮಾಹಿತಿಗಳಿಂದ, ಉದಾ: ವೃತ್ತ ಪತ್ರಿಕೆ, ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳ ದಾಖಲೆಗಳಿಂದ ಅಧ್ಯಯನವನ್ನು ಕೊನೆಗೊಳಿಸಲಾಯಿತು.

ಪೋಷಕರಿಗೆ ಮಾಹಿತಿ ಸಂಗ್ರಹಣೆಗೆ ನೀಡಿದ ಪ್ರಶ್ನಾವಳಿಯಲ್ಲಿ ವೈಯಕ್ತಿಕ ಪ್ರಶ್ನೆಗಳು ಏಳು ಹಾಗೂ ಹದಿಮೂರು ಶೈಕ್ಷಣಿಕ ಪ್ರಶ್ನೆಗಳಿದ್ದು, ಒಟ್ಟು ಇಪ್ಪತ್ತು ಪ್ರಶ್ನೆಗಳನ್ನು ಒಳಗೊಂಡಿದೆ ಮಾಹಿತಿ ಸಂಗ್ರಹಣೆಯಲ್ಲಿ ಈ ಕೆಳಗಿನ ವಿಧಾನಗಳನ್ನು ಅಳವಡಿಸಲಾಯಿತು.

1.ಸಂದರ್ಶನ 2. ಪ್ರಶ್ನಾವಳಿ 3. ಅಭಿಪ್ರಾಯ ಸಂಗ್ರಹಣೆ 4. ಗುಂಪು ಚರ್ಚೆ 5. ಅವಲೋಕನ 6. ಇತರ

**ಸಾಹಿತ್ಯ ಪರಾಮರ್ಶೆ**

ಬುಡಕಟ್ಟು ಅಧ್ಯಯನ ಮತ್ತು ಸಮೂದಾಯ ಅಧ್ಯಯನಗಳಿಗೆ ಭಾರತದಲ್ಲಿ ನೂರು ವರ್ಷಗಳಿಗಿಂತಲೂ ಹೆಚ್ಚಿನ ಇತಿಹಾಸವಿದೆ. ಈ ಸಮುದಾಯಗಳ ಬಗ್ಗೆ ವಿದ್ವಾಂಸರು ಸಂಶೋಧನೆಗಳನ್ನು ಮಾಡಿ ಅನೇಕ ಕೃತಿಗಳನ್ನು, ವರದಿಗಳನ್ನು, ಗ್ರಂಥ ಮಾಲಿಕೆಗಳನ್ನು, ಮ್ಯಾನುವಲ್ಸ್‌ಗಳನ್ನು ರಚಿಸಿದ್ದಾರೆ.

ಭಾರತದ ಬುಡಕಟ್ಟುಗಳನ್ನು ಕುರಿತಂತೆ ಹೆಚ್ಚಿನ ಸಂಖ್ಯೆಯಲ್ಲಿ ಪಾಶ್ಚಾತ್ಯ ವಿದ್ವಾಂಸರೇ ಅಧ್ಯಯನ ನಡೆಸಿರುವುದು ಕಂಡುಬಂದಿದೆ. ಸವಲತ್ತುಗಳ ಕೊರತೆ, ಬುಡಕಟ್ಟು ಅಧ್ಯಯನದ ಪ್ರಾಮುಖ್ಯತೆಯ ಅರಿವಿಲ್ಲದೆಯೂ ಇರಬಹುದು. ವೆರಿಯಲ್ ಎಲ್ವಿನ್, ಜಿ.ಎಚ್. ಹಟ್ಟನ್, ಜೆ.ಪಿ.ಮಿಲ್, ಸ್ಮಿಥ್, ಲೂವಿಸ್ ಹೈಮೆನ್ ಡಾರ್ಫ್, ಜಾರ್ಜ್ ಜೇಮ್ಸ್, ಫ್ರೇಜರ್ ಇವರೆಲ್ಲ ಉತ್ತರ ಭಾರತದ ಬುಡಕಟ್ಟುಗಳನ್ನು ಅಭ್ಯಸಿಸಿದ ಮೇಲೆ ಭಾರತೀಯರಿಗೆ ಅದರ ಮಹತ್ವದ ಅರಿವಾಗ ತೊಡಗಿತು. ಬ್ರಿಟಿಷ್ ಆಡಳಿತದ ಅನುಕೂಲಕ್ಕಾಗಿ ಜನಾಂಗಿಕ ಸಮೀಕ್ಷೆ ನಡೆಸಿದವರೆಂದರೆ, ಗ್ರಿಯರ್ ಸನ್, ವಿಲಿಯಂ ಕ್ರೂಕ್, ಎಡ್ಗರ್-ಥರಸ್ಟನ್, ಹಯವದನರಾವ್, ಎಚ್.ವಿ. ನಂಜುಡಯ್ಯ, ಸ್ವರಾಕ್ ಎಲ್.ಕೆ. ಅನಂತಕೃಷ್ಣ ಅಯ್ಯರ್ ಮುಂತಾದವರು. ದಕ್ಷಿಣ ಭಾರತದ ಜನಾಂಗೀಯ ಮತ್ತು ಬುಡಕಟ್ಟು ಅಧ್ಯಯನಕ್ಕೆ ಎಡ್ಗರ್ ಥರಸ್ಟನ್, ಎಚ್.ವಿ. ನಂಜುಡಯ್ಯ ಎಲ್.ಕೆ. ಅನಂತ ಕೃಷ್ಣ ಅಯ್ಯರ್, ಸರ್ ಜಾರ್ಜ್ ಜೇಮ್ಸ್ ಫ್ರೇಜರನ 'ಗೋಲ್ಡನ್ ಬೋ' 17 ಸಂಪುಟಗಳು ಬುಡಕಟ್ಟು ಅಧ್ಯಯನಕಾರರಿಗೆ ಆಕರಗಳಾಗಿವೆ.

ತೀ.ನಂ. ಶಂಕರನಾರಾಯಣ 1982 ಅವರ ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು, ಸೈಯದ್ ಜಮೀರುಲ್ಲಾ ಷರೀಫ್ ಅವರ ಗೊಂಡರು ಒಂದು ಸಾಂಸ್ಕೃತಿಕ ಅಧ್ಯಯನ, ಕರಿಶೆಟ್ಟಿ ರುದ್ರಪ್ಪನವರ ಮ್ಯಾಸ ನಾಯಕರು ಒಂದು ಜನಾಂಗಿಕ ಅಧ್ಯಯನ, ಹರಿಲಾಲ್ ಕೆ. ಪವಾರ್ ಅವರ ಕರ್ನಾಟಕದ ಹಳವರು, ನಲ್ಲೂರು ಪ್ರಸಾದ್ ಅವರ ಗಂಗಡಿಕಾರ ಒಕ್ಕಲಿಗರು ಮುಂತಾದವು ಕರ್ನಾಟಕದ ಬುಡಕಟ್ಟು ಅಧ್ಯಯನದ ಅಗತ್ಯಗಳನ್ನು ಸೂಚಿಸುತ್ತವೆ. ಕರ್ನಾಟಕದಲ್ಲಿ ಹಲವಾರು ಬುಡಕಟ್ಟುಗಳನ್ನು ಗುರುತಿಸಲಾಗಿದೆ. ಲೂಯಿಸ್ "ಟ್ರೈಬ್ಸ್ ಆಫ್ ಮೈಸೂರು" ಕೃತಿಯಲ್ಲಿ 27 ಬುಡಕಟ್ಟುಗಳ ವಿವರ ಕೊಟ್ಟಿದ್ದಾರೆ. (ಸಂಗ್ರಹ ಕಾಡು ಬಿಡಲೊಲ್ಲದವರು ಬೈರೇಗೌಡ)

ನಾಗರಿಕ ಜಗತ್ತಿನ ಪರಿಚಯವೇ ಇಲ್ಲದೇ ಹತ್ತು ಹಲವು ಬುಡಕಟ್ಟುಗಳು ನಮ್ಮ ಸಂಸ್ಕೃತಿಯ ಭಾಗವಾಗಿ ಉಳಿದಿವೆ. ಇಂತಹ ಬುಡಕಟ್ಟುಗಳಲ್ಲಿ ಒಂದಾದ ಇರುಳಿಗ ಜನಾಂಗದ ಅಧ್ಯಯನವನ್ನು ಡಾ। ಎಂ. ಬೈರೇಗೌಡರು (2005) ತಮ್ಮ ಕೃತಿಯಾದ "ಕಾಡುಬಿಡಲೊಲ್ಲದವರು" ಇದರಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ.

ಜೆ.ಎಫ್. ಮೇಟ್ಸ್ ಮತ್ತು ರಿವರ್ಸ್ ಅವರು 1864ರಲ್ಲಿ ನೀಲಗಿರಿಯ ಬುಡಕಟ್ಟುಗಳ ಅಧ್ಯಯನ ಮಾಡಿದರು. ಥರ್ಸ್ಟನ್ ಮತ್ತು ಶಿರಿಗಾಚಾರಿ ಅವರು ದಕ್ಷಿಣ ಭಾರತದ ಜಾತಿಗಳ ಹಾಗೂ ಬುಡಕಟ್ಟುಗಳ ಬಗ್ಗೆ ಏಳು ಸಂಪುಟಗಳ ಕೃತಿಯನ್ನು ಪ್ರಕಟಿಸಿದ್ದಾರೆ. ಎಚ್.ವಿ.ರೋಸ್ ಪಂಜಾಬ್ ಮತ್ತು ವಾಯುವ್ಯ ಗಡಿ ಪ್ರಾಂತ್ಯಗಳಲ್ಲಿ ಬುಡಕಟ್ಟುಗಳ ಮತ್ತು ಜಾತಿಗಳ ಅಧ್ಯಯನ ಮಾಡಿದ್ದಾರೆ. ಆರ್.ವಿ.ರಸ್ ಮತ್ತು ಹೀರಾಲಾಲ್ ಅವರು ಮಧ್ಯಪ್ರದೇಶದ ಬುಡಕಟ್ಟುಗಳ ಅಧ್ಯಯನ ಮಾಡಿದ್ದಾರೆ. ಆರ್.ಇ. ಎನ್‌ಥೋವನ್ ಅವರು ಬೊಂಬಾಯಿ ಬುಡಕಟ್ಟುಗಳ ಅಧ್ಯಯನ ಮಾಡಿದ್ದಾರೆ. ಮದರಾಸ್ ಪ್ರೆಸಿಡೆನ್ಸಿಯಲ್ಲಿದ್ದ ಅಪರಾಧಿ ಬುಡಕಟ್ಟುಗಳ ಇತಿಹಾಸವನ್ನು ಕುರಿತು ಇ. ರಾಮಚಂದ್ರ ಶಾಸ್ತ್ರಿ ಒಂದು ಕೃತಿಯನ್ನು ಪ್ರಕಟಿಸಿದ್ದಾರೆ.

ಪ್ರೊ.ಕೆ. ಭೈರಪ್ಪ (2009) ಅವರ 'ಭಾರತದ ಸಮಾಜ' ಪರಂಪರೆ ಮತ್ತು ಪರಿವರ್ತನೆ ಭಾಗ-2 ಗ್ರಂಥದಲ್ಲಿ ಭಾರತದ ಬುಡಕಟ್ಟು ಜನಾಂಗಗಳ ಅರ್ಥ, ದೈಹಿಕ ಲಕ್ಷಣಗಳು, ಸಮಸ್ಯೆಗಳು, ಭಾರತದ ಪ್ರಮುಖ ಬುಡಕಟ್ಟುಗಳು ಮತ್ತು ಇವರ ಏಳಿಗೆಗಾಗಿ ಸರಕಾರ ಕೈಗೊಂಡ ಯೋಜನೆಗಳ ಬಗ್ಗೆ ವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ.

ಗಂಗಾಧರ ದೈವಜ್ಞ (2000) ಬರೆದ ಕೃತಿ 'ಬುಡಕಟ್ಟು ಅಧ್ಯಯನ ಮಾಲೆ-2' ಬುಡಕಟ್ಟು ಸಮಾಜ ಹುಟ್ಟು, ಸಾವಿನ ನಡುವೆ, ಇದರಲ್ಲಿ ಬುಡಕಟ್ಟು ಜನಾಂಗಗಳಾದ ಹಸಲರು, ಕಾಡುಗೊಲ್ಲರು, ಕಾಡುಕುರುಬರು, ಜೇನು ಕುರುಬರು, ಸೋಲಿಗರು, ಮ್ಯಾಸಬೇಡರು, ಹಾಲಕ್ಕಿಗಳು ಮತ್ತು ಗೊಂಡರಿಗೆ ಸಂಬಂಧಿಸಿದಂತಹ ವಿಷಯಗಳನ್ನು ಆಯ್ಕೆ ಮಾಡಿಕೊಂಡಿದ್ದು, ಇದರಲ್ಲಿ ಈ ಬುಡಕಟ್ಟು ಜನಾಂಗಗಳ ಸೃಷ್ಟ ಪುರಾಣಗಳು ಆಚರಣೆ, ನಂಬಿಕೆಗಳ ಬಗ್ಗೆ ಹೆಚ್ಚಿನ ವಿವರಣೆ ಇದೆ.

ಗಂಗಾಧರ ದೇವಜ್ಞ ಹೇಳುವಂತೆ ಸರ್ಕಾರ ಬುಡಕಟ್ಟು ಜನರ ಮಕ್ಕಳಿಗೆ ಶಿಕ್ಷಣ ನೀಡಿ ಆ ಮೂಲಕ ಅವರಲ್ಲಿ ಅರಿವು ಮೂಡಿಸಲು ಸರ್ಕಾರ ಅನೇಕ ಗಿರಿಜನ ವಸತಿ ಶಾಲೆಗಳನ್ನು ಸ್ಥಾಪಿಸಿದೆ. ಆದರೆ ಆ ವಸತಿ ಶಾಲೆಗಳಲ್ಲಿ ಶಿಕ್ಷಣ ಆಧುನಿಕತೆಯಿಂದ ಕೂಡಿದ್ದರೂ ಅದರ ಲಾಭವಾಗುತ್ತಿಲ್ಲ. ಏಳನೆಯ ತರಗತಿಯಿಂದ ಎಸ್.ಎಸ್.ಎಲ್.ಸಿ.ವರೆಗೆ ಓದುವ ಗಿರಿಜನ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತಿದೆ. ಇದಕ್ಕೆ ಕಾರಣಗಳೇನು? ಅವರ ಶಿಕ್ಷಣದಲ್ಲಿ ಬೋಧನಾ ವ್ಯವಸ್ಥೆಯಲ್ಲಿ ಬದಲಾವಣೆಯಾಗಬೇಕೆ? ಸ್ವತಂತ್ರವಾಗಿ ಬದುಕು ಕಂಡುಕೊಳ್ಳುವ ವೃತ್ತಿಪರ ಶಿಕ್ಷಣದ ಅಗತ್ಯವಿದೆಯೇ? ಎಂಬುದರ ಬಗ್ಗೆ ಯೋಚಿಸಬೇಕಾದ ಅಗತ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಡಾ। ಮಂಜುನಾಥ್ ಬೇವಿನಕಟ್ಟೆ (2003) ಅವರ 'ಆದಿವಾಸಿ' ಕೃತಿ ಬುಡಕಟ್ಟು ಸಂಸ್ಕೃತಿಯ ಬಗೆಗೆ ಉಪಯುಕ್ತವಾದ ಬೆಳಕನ್ನು ಚೆಲ್ಲುತ್ತದೆ. ಬುಡಕಟ್ಟುಗಳ ಸಂಸ್ಕೃತಿಯು ಕಾಲಾಂತರದಲ್ಲಿ ಬದಲಾಗಿ,ಜಾತಿಯಾಗಿ ಮುಂದೆ ಹಿಂದೂ ಧರ್ಮದ ಚೌಕಟ್ಟಿನೊಳಗೆ ಪರಿವರ್ತನೆ ಹೊಂದಿದ್ದನ್ನು ಇವರ

ಲೇಖನಗಳು ದಾಖಲಿಸುತ್ತವೆ. ಈ ಪುಸ್ತಕದಲ್ಲಿ ಬುಡಕಟ್ಟುಗಳ ಚಹರೆ, ಸ್ವರೂಪ, ಸ್ವಭಾವ ಸಂಚಲನೆ, ಸಂಕೋಚ, ಸ್ವಾಭಿಮಾನ ರೂಪಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ.

ಇತ್ತೀಚೆಗೆ ಕೊರಗರ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. 19ನೇ ಶತಮಾನದಲ್ಲಿ ನಡೆದ ಅಧ್ಯಯನವು ಅತ್ಯಂತ ಪ್ರಾಚೀನವಾದುದು. 1894ರಲ್ಲಿ ಸ್ವರಕ್ ಮತ್ತು ವಾಲ್ ಹೌಸ್ ಎಂಬ ಇಬ್ಬರು ವಿದ್ವಾಂಸರು ಕೊರಗರ ಬಗ್ಗೆ ಅಧ್ಯಯನ ಮಾಡಿದ್ದಾರೆ.

ಸ್ವರಕ್ ಕೊರಗರ ಐತಿಹಾಸಿಕ ಹಿನ್ನಲೆ ಬಗ್ಗೆ ವಿವರಣೆ ಕೊಟ್ಟಿದ್ದಾರೆ. ಇವರ ಪ್ರಕಾರ ಕೊರಗರು ಕಾಡುಗಳಲ್ಲಿ ವಾಸಿಸುವ ಒಂದು ಜನವರ್ಗವಾಗಿದ್ದು, ಇವರನ್ನು ಕೊರಮರು, ಕೊರಚರು ಅಥವಾ ಎರುಕುಲರುಗಳೊಂದಿಗೆ ಹೋಲಿಸಲಾಗುತ್ತದೆ. ಏಕೆಂದರೆ ಅವರಂತೆ ಕೊರಗರು ಬುಟ್ಟಿ ಹೆಣೆಯುತ್ತಾ ಕಾಡಿನಲ್ಲಿ ವಾಸಿಸುವವರು. ಸ್ವರಕ್ ಅವರ ಪ್ರಕಾರ ಕೊರಗರು ತುಂಬಾ ಕಪ್ಪಾಗಿದ್ದು, ಹಣೆ ಇಳಿಜಾರಾಗಿರುತ್ತದೆ. ದೇಹದ ಕೆಳಭಾಗವನ್ನು ಕಪ್ಪು ಬಟ್ಟೆಯಿಂದ ಮತ್ತು ಮೇಲ್ಭಾಗವನ್ನು ಬಿಳಿ ಬಟ್ಟೆಯಿಂದ ಮುಚ್ಚಿಕೊಳ್ಳುತ್ತಾರೆ. ತಲೆಯ ಮೇಲೆ ಅಡಿಕೆ ಹಾಳೆಯಿಂದ ಮಾಡಿದ ಟೊಪ್ಪಿಯನ್ನು ಹಾಕಿಕೊಳ್ಳುತ್ತಾರೆ. ಕೊರಗರ ಸಾಮಾಜಿಕ ಜೀವನ ಮತ್ತು ಧಾರ್ಮಿಕ ಜೀವನದ ಬಗ್ಗೆ ಸ್ವರಕ್ ಅಧ್ಯಯನ ಮಾಡಿದ್ದಾರೆ. ಅವರ ಪ್ರಕಾರ ಕೌಟುಂಬಿಕ ಸಮಸ್ಯೆಗಳನ್ನು ಕುಟುಂಬದ ಯಜಮಾನನೇ ಪರಿಹರಿಸುತ್ತಾನೆ. ಸಾಮಾನ್ಯವಾಗಿ ತಪ್ಪು ಮಾಡಿದವರಿಗೆ ದಂಡ ವಿಧಿಸಲಾಗುತ್ತಿತ್ತು.

ವಾಲ್ ಹೌಸ್ ಕೊರಗರ ಬಗ್ಗೆ ಈ ಕೆಳಗಿನ ವಿವರಣೆಯನ್ನು ನೀಡಿದ್ದಾರೆ. ಭಾರತದಲ್ಲಿ ಅನೇಕ ಜಾತಿಗಳಿದ್ದು ಇವುಗಳಿಗೆ ಕಾನೂನಿನ ಮಾನ್ಯತೆ ಇಲ್ಲ. 1843ರಿಂದಲೂ ಅವುಗಳ ಏಳಿಗೆಗಾಗಿ ಪ್ರಯತ್ನಿಸುತ್ತಿದ್ದರೂ ಇವತ್ತಿಗೂ ಅವರು ಗುಲಾಮರಾಗಿಯೇ ಇದ್ದಾರೆ. ವಾಲ್ ಹೌಸ್ ಅವರು ವರ್ಣಗಳ ಹುಟ್ಟುಗಳ ಬಗ್ಗೆ ಮತ್ತು ಕೊರಗರು ಯಾವ ವರ್ಣಕ್ಕೆ ಸೇರಿದವರು ಎನ್ನುವುದನ್ನು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ.

ವಿದೇಶಿ ವಿದ್ವಾಂಸರುಗಳಲ್ಲದೇ ದೇಶದ ಅನೇಕ ವಿದ್ವಾಂಸರು ಕೊರಗರ ಬಗ್ಗೆ ಅಧ್ಯಯನ ಮಾಡಿದ್ದಾರೆ. ಅವರಲ್ಲಿ ಯು. ರಾಘವೇಂದ್ರ ರಾವ್, ಅಮೃತ ಸೋಮೇಶ್ವರ, ಅರವಿಂದ ಮೊಲಗತ್ತಿ ಮತ್ತು ಒಡೆಯರ್ ಡಿ. ಹೆಗ್ಗಡೆ, ಸಿ. ವಾಸುದೇವನ್, ಮೊಹಮ್ಮದ್ ಪೀರ್ ಪ್ರಮುಖರು.

ಯು. ರಾಘವೇಂದ್ರ ರಾವ್ ಕೊರಗರ ಬಗ್ಗೆ ಕೆಳಗಿನ ವಿವರಣೆಗಳನ್ನು ನೀಡಿದ್ದಾರೆ. ಇವರ ಪ್ರಕಾರ ದೈಹಿಕವಾಗಿ ಕೊರಗರು ಇತರರಿಗಿಂತ ಭಿನ್ನವಾಗಿದ್ದು ಅವರಿಗೆ ಅವರದ್ದೇ ಆದ ಭಾಷೆ, ಉಡುಪು ಮತ್ತು ಸಂಪ್ರದಾಯಗಳಿವೆ. ಇವರಿಗೆ ಇವರದ್ದೇ ಆದ ಸೀಮಿತವಾದ ಪ್ರಪಂಚವಿದೆ. ದೇಶದಲ್ಲಿ ಏನು ನಡೆಯುತ್ತದೆ ಎನ್ನುವುದರ ಅರಿವು ಅವರಿಗಿರುವುದಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಇವರು ಅಸ್ಪೃಶ್ಯರು ಮತ್ತು ಅನಕ್ಷರಸ್ಥರು. ಇವರಿಗೆ ದೇವರ ಮೇಲೆ ಅಪಾರವಾದ ನಂಬಿಕೆಯಿದೆ. ಯಾವುದೇ ಸಾಮಾಜಿಕ ಅನಿಷ್ಟಗಳು ಅವರಿಗೆ ಗೊತ್ತಿಲ್ಲ. ಕೊರಗರು ಗುಲಾಮರಾಗಿ ತೀರಾ ಹೀನಾಯ ಸ್ಥಿತಿಯಲ್ಲಿದ್ದರು. ಅತ್ಯಂತ

ದು:ಖಿಗಳಾಗಲಿ, ಅಸಂತೋಷಿಗಳಾಗಲಿ ಇಲ್ಲದಿರುವುದು ಕಂಡು ಬರುತ್ತದೆ ಎಂದು ರಾಘವೇಂದ್ರ ರಾವ್ ಅಭಿಪ್ರಾಯ ಪಡುತ್ತಾರೆ. ಒಬ್ಬ ಗಂಡಸಿಗೆ ದಿನಕ್ಕೆ ಮೂರಾಣೆ ಅಕ್ಕಿ ಅಥವಾ ಒಂದು ಆಣೆ ನಗದು ಮತ್ತುಉಳಿದುದಕ್ಕೆ ಅಕ್ಕಿಯನ್ನು ಪಡೆಯುವನು. ಒಂದು ಸ್ತ್ರೀಗೆ ದಿನಕ್ಕೆ ಎರಡಾಣೇ ಕೂಲಿ ಅಕ್ಕಿರೂಪದಲ್ಲಿ ದೊರೆಯುತ್ತದೆ. ಕೆಲವೊಮ್ಮೆ ಈ ಗುಲಾಮರನ್ನು ಅವರ ಧಣಿಗಳು ಅವರನ್ನು ಮಾರಿಕೊಳ್ಳುವುದುಂಟು, ಗಂಡು ಗುಲಾಮನನ್ನು ಮೂರು ಪಗೋಡಾಗಳಿಗೆ, ಸ್ತ್ರೀ ಗುಲಾಮರನ್ನು ಐದು ಪಗೋಡಾಗಳಿಗೆ ಮಾರಲಾಗುತ್ತಿತ್ತು. ರಾಘವೇಂದ್ರ ರಾವ್ ಅವರ ಪ್ರಕಾರ ಕೊರಗರಲ್ಲಿ ಮಾತೃ ಮೂಲ ಕುಟುಂಬಗಳಿರುವುದಾಗಿ ತಿಳಿಸಿದ್ದಾರೆ.

ಅಮೃತ ಸೋಮೇಶ್ವರರು (1982) ಕೊರಗರ ಬಗ್ಗೆ ಅಧ್ಯಯನ ಮಾಡಿದ್ದಾರೆ. ಅವರು ಬರೆದಂತಹ 'ಕೊರಗರು' ಎಂಬ ಪುಸ್ತಕದಲ್ಲಿ ಕೊರಗರಿಗೆ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ನೀಡಿದ್ದಾರೆ. ಈ ಕೃತಿಯಲ್ಲಿ ಕೊರಗರ ಸಾಂಸ್ಕೃತಿಕ, ಸಾಮಾಜಿಕ ಮತ್ತು ಆರ್ಥಿಕ ಜೀವನಶೈಲಿಯ ಬಗೆಗೆ ವಿವರಗಳಿವೆ. ಕೊರಗರ ಸಮಾಜದ ಬಗ್ಗೆ ಅವರು ಹೀಗೆ ಬರೆಯುತ್ತಾರೆ. ಕೊರಗರ ಸಮಾಜದಲ್ಲಿ ಶಿಸ್ತಿಗೆ ತುಂಬಾ ಪ್ರಾಮುಖ್ಯತೆ ಇತ್ತು. ಮೊದಲನೆ ಹೆಂಡತಿ ಇರುವಾಗ ಪುರುಷ ಇನ್ನೊಂದು ವಿವಾಹವಾಗುವಂತಿರಲಿಲ್ಲ. ಮನೆಗೆ ಬಂದ ಪುರುಷ ಅತಿಥಿಗಳು ಆ ಮನೆಯ ಹೆಂಗಸರನ್ನು ದಿಟ್ಟಿಸಿ ನೋಡುವಂತಿರಲಿಲ್ಲ.ಮನೆಯಲ್ಲಿ ಅಡ್ಡಲಾಗಿ ಒಂದು ಬಟ್ಟೆಯನ್ನು ಕಟ್ಟಿ ಅದರಾಚೆ ನಿಂತು ಹೆಂಗಸಿನೊಟ್ಟಿಗೆ ಮಾತನಾಡುವುದು ವಾಡಿಕೆಯಾಗಿತ್ತು.ಹೆಣ್ಣು ನಡತೆಗೆಟ್ಟವಳು ಎಂದು ಗೊತ್ತಾದರೆ ಅವಳು ಒಂದು ಪರೀಕ್ಷೆಯನ್ನು ಕೊಡಬೇಕಾಗಿತ್ತು. ಇದಕ್ಕೆ ಬೇಕಾದ ಖರ್ಚನ್ನು ತಪ್ಪಿತಸ್ಥನೇ ತೆರಬೇಕಾಗುತ್ತಿತ್ತು. ಪ್ರಾಯಶ್ಚಿತ್ತದ ನಂತರವೇ ಅವಳಿಗೆ ಸಮಾಜದಲ್ಲಿ ಸೇರಿಸಿಕೊಳ್ಳಲಾಗುತ್ತಿತ್ತು.

ಅಮೃತ ಸೋಮೇಶ್ವರರ ಅಧ್ಯಯನದಿಂದಲೂ ಕೊರಗರು ಅಳಿಯಕಟ್ಟು ಅಥವಾ ಮಾತೃಮೂಲ ಕಟ್ಟನ್ನು ಆಚರಿಸುತ್ತಾರೆ. ಇವರ ಏಳು ಮಾಗಡಿ ಕೊಟ್ಟವು ಮೊದಲು ಬಪ್ಪನಾಡಿನಲ್ಲಿ ಈಗ ಕಾಪುವಿನಲ್ಲಿ ನಡೆಯುತ್ತದೆ. ಕೊರಗ ಸಮಾಜದ ಮುಖ್ಯಸ್ಥರು ಜಾತಿ ಸಭೆಯನ್ನು ಕರೆಯುತ್ತಿದ್ದರು. ಸಮಾಜದಲ್ಲಿ ನಡೆಯುವ ಜಗಳಗಳನ್ನು ಬಗೆಹರಿಸಿ ತಪ್ಪಿತಸ್ಥರಿಗೆ ಕಠಿಣ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು.

ಕೊರಗರ ಭವಿಷ್ಯದ ಕುರಿತು ಕೆಲವು ಲೇಖಕರು ಹೀಗೆ ಹೇಳುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳಲ್ಲಿ ಅನೇಕರು ವಿದ್ಯಾಭ್ಯಾಸವನ್ನು ಪಡೆದುಕೊಂಡು ಮುಂದೆ ಬಂದಿದ್ದಾರೆ. ಆದರೆ ಕೊರಗರಲ್ಲಿ ವಿದ್ಯಾವಂತರು ತುಂಬಾ ವಿರಳ. ಅದರಲ್ಲಿ ಬೆರಳಣಿಕೆಯಷ್ಟು ಜನ ಶಿಕ್ಷಣವನ್ನು ಪಡೆದುಕೊಂಡು ಸಣ್ಣ ಪುಟ್ಟ ಸರಕಾರಿ ಉದ್ಯೋಗದಲ್ಲಿದ್ದಾರೆ.

ಸರಕಾರ ಇವರ ಏಳಿಗೆಗಾಗಿ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದ್ದರೂ ಅದು ಅವರಿಗೆ ತಲುಪುತ್ತಿಲ್ಲ. ಕೊರಗರಲ್ಲಿ ಅನೇಕರಿಗೆ ಸರಕಾರದ ಯೋಜನೆಗಳ ಅರಿವಿಲ್ಲ. ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಅಸ್ಪೃಶ್ಯರಾಗಿರುವ ಇವರ ಉದ್ಧಾರ ಶೀಘ್ರವಾಗಿ ಆಗುವಂತಹದ್ದಲ್ಲ. ಅನೇಕ ವರ್ಷಗಳಿಂದ

ಇವರ ಉದ್ಧಾರಕ್ಕಾಗಿ ಅನೇಕ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಅದರ ಲಾಭವನ್ನು ಪಡೆದುಕೊಂಡು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲಿ ಎಂದು ಹಾರೈಸೋಣ ಎಂದು ಅಮೃತ ಸೋಮೇಶ್ವರರು (1991) ತಮ್ಮ ಪುಸ್ತಕದಲ್ಲಿ ತಿಳಿಸಿದ್ದಾರೆ.

ಅರವಿಂದ ಮಾಲಗತ್ತಿ ಮತ್ತು ಒಡೆಯರ್ ಡಿ. ಹೆಗ್ಗಡೆಯವರು "ಕೊರಗ ಜನಾಂಗ ವಿಶ್ಲೇಷಣಾತ್ಮಕ ಅಧ್ಯಯನ" ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಕೊರಗರ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನಲೆ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ. ಕೊರಗರ ಬಗ್ಗೆ ಲೇಖಕರು ಈ ಕೆಳಗಿನ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದ್ದಾರೆ. 20ನೇ ಶತಮಾನದಲ್ಲಿ ಮುಖ್ಯವಾಗಿ ಭಾರತದ ಸ್ವಾತಂತ್ರ್ಯ ನಂತರದ ವರ್ಷಗಳಲ್ಲಿ, ಊಳಿಗಮಾನ್ಯ ವ್ಯವಸ್ಥೆ ನಾಶವಾದಂತೆಲ್ಲ ಕೊರಗರು ಧಣಿಗಳಿಂದ ಬಿಡುಗಡೆ ಪಡೆದರು. 20ನೇ ಶತಮಾನದ ರಾಜಕೀಯ ಬೆಳವಣಿಗೆಗಳು ಕೊರಗರಿಗೂ ಸ್ವಾತಂತ್ರ್ಯ ತಂದವು. ಈ ವ್ಯಾಖ್ಯಾನದಂತೆ 20ನೇ ಶತಮಾನದಲ್ಲಿ ಊಳಿಗಮಾನ್ಯ ಪದ್ಧತಿ ನಾಶವಾದಂತೆ ಕೊರಗರ ಜೀವನ ಶೈಲಿಯಲ್ಲಿಯೇ ಬದಲಾವಣೆಯಾಯಿತು. ಇವರ ಪ್ರಕಾರ, ಕೊರಗರ ಮುಖ್ಯ ಕಸುಬು ಬುಟ್ಟಿ ಹೆಣೆಯುವುದು. ಈ ಉದ್ಯೋಗದ ಹೊರತಾಗಿ ಬೇರೆ ಉದ್ಯೋಗಗಳಲ್ಲಿ ಅಷ್ಟೊಂದು ಪರಿಣಿತರಾದವರಲ್ಲ. ಕಾಡಿನಿಂದ ಬೆತ್ತ ತಂದು ಅದರಿಂದ ವಿವಿಧ ಬಗೆಯ ಬುಟ್ಟಿಯನ್ನು ತಯಾರಿಸಿ ರೈತರಿಗೆ ಅವುಗಳನ್ನು ಮಾರುತ್ತಿದ್ದರು. ಕೊರಗರು ತಯಾರಿಸಿದ ಬುಟ್ಟಿಗಳಿಗೆ ನ್ಯಾಯೋಚಿತವಾದ ಬೆಲೆ ಸಿಕ್ಕುತ್ತಿಲ್ಲ. ಈ ಕಾರಣದಿಂದ ಅವರು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಅವರು ತಯಾರಿಸಿದ ವಸ್ತುಗಳಿಗೆ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಇಲ್ಲ. ಇತ್ತೀಚಿನ ದಿನಗಳಲ್ಲಿ ಕೊರಗರ ಬುಟ್ಟಿಗಳನ್ನು ಮುಸ್ಲಿಂ ವ್ಯಾಪಾರಸ್ಥರು ಅತ್ಯಂತ ಕಡಿಮೆ ಬೆಲೆಯಲ್ಲಿ ಖರೀದಿಸಿ ಮಾರುಕಟ್ಟೆಯಲ್ಲಿ ಒಳ್ಳೆಯ ಲಾಭವನ್ನು ಪಡೆಯುತ್ತಿದ್ದಾರೆ. ಇವರ ಪ್ರಕಾರ, ಇತ್ತೀಚಿನ ವರ್ಷಗಳಲ್ಲಿ ಪೇಟೆಗಳಲ್ಲಿ ಕೊರಗರು ಜಾಡಿಮಾಲಿಗಳಾಗಿ ಮತ್ತು ನೈರ್ಮಲೀಕರಣದ ವೃತ್ತಿಗಳಲ್ಲಿ ತೊಡಗಿದ್ದಾರೆ. ಕೊರಗರು ತಮ್ಮದೆ ವೃತ್ತಿಯ ಭಂಗಿಗಳೊಂದಿಗೆ ವಿವಾಹ ಸಂಬಂಧ ಮಾಡುತ್ತಿರುವುದು ಇತ್ತೀಚಿನ ಬೆಳವಣಿಗೆ ಎಂದು ಲೇಖಕರು ತಮ್ಮ ಅಧ್ಯಯನದಿಂದ ತಿಳಿಸಿದ್ದಾರೆ.

ಕೊರಗರ ಇತ್ತೀಚಿನ ಇನ್ನೊಂದು ಕೃತಿ ಎಂದರೆ, ಲಾರೆನ್ಸ್ ಡಿ'ಸೋಜಾ (1992) ಅವರು ಬರೆದ 'Koragaas-A primitive tribe of South India' ಈ ಕೃತಿಯಲ್ಲಿ ಲೇಖಕರು ಕೊರಗರ ಐತಿಹ್ಯಗಳು, ಕೊರಗರ ವಾಸಸ್ಥಳ, ಕೊರಗರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ವಿಸ್ತಾರವಾದ ಮಾಹಿತಿಯನ್ನು ಕೊಟ್ಟಿದ್ದಾರೆ.

ಶ್ರೀ ಪಾಂಗಾಳ ಬಾಬು ಕೊರಗ (2009) ಇವರು "ಕೊರಗರ ಅಜಲು-ಒಂದು ವಿಶ್ಲೇಷಣೆ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ಪುಸ್ತಕದಲ್ಲಿ ಲೇಖಕರು ಕೊರಗರ ಅಜಲು ಒಳಗೊಳ್ಳುವ ವಿಧಿ ಮತ್ತು ಕ್ರಿಯೆಗಳ ಸಮಗ್ರ ವಿವರಗಳನ್ನು ನೀಡಿದ್ದಾರೆ. ಎಲ್ಲ ಸಮಾಜಗಳಂತೆ ಕೊರಗರಲ್ಲಿ ಶಿಕ್ಷಣದ ಪರಿಚಯ

ನಿಧಾನವಾಗಿಯಾದರು ಶಿಕ್ಷಿತರಾಗುತ್ತಿರುವುದು ತುಂಬಾ ಸಂತೋಷದ ವಿಷಯ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಎ.ಎಸ್. ಪ್ರಭಾಕರ (2006) ಬರೆದಂತಹ 'ಆದಿವಾಸಿ ಆಖ್ಯಾನ' ಎಂಬ ಪುಸ್ತಕದಲ್ಲಿ ಕೊರಗ ಸಮುದಾಯದ ಆಧುನಿಕ ಮುಖಾಮುಖಿ ಎಂಬ ಪ್ರಬಂಧವನ್ನು ಎಚ್. ನಾಗವೇಣಿ ಅವರು ಬರೆದಿದ್ದಾರೆ. ಈ ಪ್ರಬಂಧದಲ್ಲಿ ಕೊರಗರ ಅಸ್ಪೃಶ್ಯತೆ, ಬಡತನ, ವರ್ಣ ವ್ಯವಸ್ಥೆಯ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ನಗರ ಪ್ರದೇಶದಲ್ಲಿರುವ ಕೆಲವು ಕೊರಗರು ಶಿಕ್ಷಣವನ್ನು ಪಡೆದು ಕೆಲವೊಂದು ಉದ್ಯೋಗಗಳನ್ನು ಮಾಡುತ್ತ ತಮ್ಮ ಆರ್ಥಿಕ ಸ್ಥಿತಿಯನ್ನು ಸ್ವಲ್ಪ ಉತ್ತಮ ಪಡಿಸಿಕೊಳ್ಳುತ್ತಿದ್ದರೆ ಹಳ್ಳಿಗಳಲ್ಲಿರುವ ಕೊರಗರ ಪರಿಸ್ಥಿತಿ ತುಂಬಾ ಶೋಚನೀಯ ಎಂಬುದು ಎಚ್. ನಾಗವೇಣಿಯವರ ಅಧ್ಯಯನದಿಂದ ತಿಳಿದು ಬರುತ್ತದೆ.

ಸಿ. ವಾಸುದೇವನ್ ಐ.ಎ.ಎಸ್. ನಿವೃತ್ತಿ ಅಧಿಕಾರಿಯಾಗಿದ್ದು ಇವರು ಕೊರಗರ ಬಗ್ಗೆ ಆಳವಾದ ಅಧ್ಯಯನವನ್ನು ಮಾಡಿದ್ದಾರೆ. ವಾಸುದೇವನ್ (1998) ಅವರು ಬರೆದ ಕೃತಿ "Koragas – The Forgotten lot – The primitive tribe of Tulu Nadu" ಈ ಕೃತಿಯಲ್ಲಿ ವಾಸುದೇವನ್ ಅವರು ಕೊರಗರ ಸಂಸ್ಕೃತಿ ಮತ್ತು ಇತಿಹಾಸದ ಬಗ್ಗೆ ಆಳವಾಗಿ ಅಭ್ಯಸಿಸಿದ್ದಾರೆ. ಇವರು ದ.ಕ. ಮತ್ತು ಕಾಸರಗೋಡಿನಲ್ಲಿ ವಾಸಿಸುವ ಕೊರಗರ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ. ಕೊರಗರ ಜನಸಂಖ್ಯೆ ಭಾಷೆ, ಆರೋಗ್ಯ ಅಲ್ಲದೇ ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಬೆಳವಣಿಗೆಗಳ ಬಗ್ಗೆ ಸವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ.

1994ರಲ್ಲಿ ಡಾ। ಮಹಮ್ಮದ್ ಪೀರ್ ಅವರು "Social Economics and Educational Conditions of Koragas". ಎಂಬ ಮಹಾಪ್ರಬಂಧವನ್ನು ಜಿಲ್ಲಾ ಪಂಚಾಯತ್‌ಗೆ ಸಲ್ಲಿಸಿದರು. ಈ ಪ್ರಬಂಧದಲ್ಲಿ ಪೀರ್ ಅವರು ದ.ಕ ಜಿಲ್ಲೆಯಲ್ಲಿ ಕೊರಗರ ಜನಸಂಖ್ಯೆ ಎಷ್ಟು? ಅವರ ಆರ್ಥಿಕ ಸಾಮಾಜಿಕ ಸ್ಥಿತಿಗತಿ ಶೈಕ್ಷಣಿಕ ಸ್ಥಾನಮಾನ, ಮುಂತಾದವುಗಳ ಬಗ್ಗೆ ವಿವರಿಸಿದ್ದಾರೆ.

ಡಾ. ಪುರುಷೋತ್ತಮ ಬಿಳಿಮಲೆ (1993) ಅವರು ಬರೆದ 'ಕೊರಗರ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಕೊರಗರ ಐತಿಹ್ಯ ಅವರ ಮೂಲ, ದ.ಕ. ಜಿಲ್ಲೆಯಲ್ಲಿ ಅವರ ವಾಸಸ್ಥಳಗಳು, ಕೊರಗರ ವೃತ್ತಿ ಮತ್ತು ಜೀವನ ವಿಧಾನಗಳ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು ನೀಡಿದ್ದಾರೆ. ದ.ಕ. ಮತ್ತು ಉಡುಪಿಯಲ್ಲಿ ವಾಸಿಸುತ್ತಿರುವ ಕೊರಗರಲ್ಲಿ ಶಿಕ್ಷಣದ ಮಟ್ಟವನ್ನು ಅಳೆಯಲು ಸಮಗ್ರ ಗ್ರಾಮೀಣ ಆಶ್ರಮ ಮತ್ತು ಕೊರಗಾಭಿವೃದ್ಧಿ ಸಂಘಗಳ ಒಕ್ಕೂಟ ಒಟ್ಟಿಗೆ ಸೇರಿ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಆ ಕೃತಿಯ ಹೆಸರು 'ಕೊರಗ ಸಮುದಾಯದಲ್ಲಿ ಶಿಕ್ಷಣ ಒಂದು ಅಧ್ಯಯನ'.

ಒಟ್ಟಿನಲ್ಲಿ ಕೊರಗರ ಬಗೆಗೆ ಇದುವರೆಗೆ ನಡೆದ ಸಂಶೋಧನೆಗಳನ್ನು ಪರಿಶೀಲಿಸಿದಾಗ, ಎಲ್ಲ ಲೇಖಕರು ಕೊರಗರಿಗೆ ಸಂಬಂಧಿಸಿದ ವಿಸ್ತಾರವಾದ ಮಾಹಿತಿಯನ್ನು ಕೊಟ್ಟಿದ್ದಾರೆ. ಆದರೆ ಕೊರಗ

ಸಮುದಾಯದ ಶೈಕ್ಷಣಿಕ ಚಲನೆಯ ಕುರಿತು ನಡೆಸಿದ ಅಧ್ಯಯನಗಳು ಬಹಳ ವಿರಳವಾದುದರಿಂದ ಈ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯಗಳು ಮತ್ತು ವರದಿಗಳೂ ಅಲಭ್ಯವಾಗಿವೆ. ಪರಿಣಾಮವಾಗಿ ನಿರ್ದಿಷ್ಟವಾಗಿ ಕೊರಗ ಸಮುದಾಯದ ಶೈಕ್ಷಣಿಕ ಚಲನೆ ಮತ್ತು ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಶೈಕ್ಷಣಿಕ ಚಲನೆಯ ಕುರಿತು ಒಂದು ಸಂಶೋದನಾತ್ಮಕ ಅಂತರ ನಿರ್ಮಾಣವಾಗಿದೆ. ಈ ಅಂತರವನ್ನು ತುಂಬುವಲ್ಲಿ ಪ್ರಸ್ತುತ ಅಧ್ಯಯಸವು ಸ್ವಲ್ಪ ಮಟ್ಟಿಗೆ ಸಹಕಾರಿಯಾಗಬಲ್ಲದು.

**ಅಧ್ಯಯನದ ಊಹೆಗಳು**

1. ಆಧುನೀಕರಣ ಪ್ರಭಾವದಿಂದಾಗಿ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಕೊರಗರಲ್ಲಿ ಪ್ರಗತಿಪರ ಬದಲಾವಣೆಗಳಾಗಿವೆ.
2. ಕೊರಗ ಸಮುದಾಯದ ಹೆಚ್ಚಿನ ಸದಸ್ಯರಲ್ಲಿ ಶಿಕ್ಷಣದ ಅರಿವು ಮೂಡಿ, ಶೈಕ್ಷಣಿಕ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ.
3. ಶಿಕ್ಷಣದ ಅರಿವು ಮತ್ತು ಸೌಲಭ್ಯಗಳ ಬಳಕೆಯಿಂದಾಗಿ ಕೊರಗರಲ್ಲಿ ಶೈಕ್ಷಣಿಕ ಚಲನೆಯ ಪ್ರಮಾಣ ಹೆಚ್ಚುತ್ತಿದೆ.

**ಅಧ್ಯಯನದ ಇತಿಮಿತಿಗಳು:**

1. ಪ್ರಸ್ತುತ ಶೈಕ್ಷಣಿಕ ಚಲನೆಗೆ ಸಂಬಂಧಿಸಿದ ಅಧ್ಯಯನವು ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನಲ್ಲಿರುವ ಕೊರಗ ಸಮುದಾಯಕ್ಕೆ ಅನ್ವಯವಾಗುವುದು ಮತ್ತು ಜಿಲ್ಲೆಯ ಇತರ ಭಾಗದಲ್ಲಿರುವ ಅಥವಾ ನೆರೆಹೊರೆಯ ಜಿಲ್ಲೆಯಲ್ಲಿರುವ ಕೊರಗ ಸಮುದಾಯದಲ್ಲಿನ ಶೈಕ್ಷಣಿಕ ಚಲನೆಯ ಬಗ್ಗೆ ಮಾಹಿತಿ ನೀಡುವುದಿಲ್ಲ.
2. ಅಧ್ಯಯನದಲ್ಲಿ ಅಳವಡಿಸಿದ ನಮೂನೆಯ ಗಾತ್ರ 105ಮಾತ್ರ ಆಗಿದ್ದು ಇದರಿಂದಾಗಿ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಲಾಗಿದೆ. ಪರಿಣಾಮವಾಗಿ ಪ್ರಸ್ತುತ ಅಧ್ಯಯನದಲ್ಲಿ ಆಳವಾದ ಅಧ್ಯಯನ ಮತ್ತು ವಿಶ್ಲೇಷಣೆಗೆ ಅವಕಾಶವಿರುವುದಿಲ್ಲ.
3. ಪ್ರಸ್ತುತ ಅಧ್ಯಯನವು ಕೊರಗರ ಬುಡಕಟ್ಟು ಸಮುದಾಯಕ್ಕೆ ಮಾತ್ರ ಸೀಮಿತವಾದುದರಿಂದ ಜಿಲ್ಲೆಯಲ್ಲಿ ಅಥವಾ ತಾಲೂಕುಗಳಲ್ಲಿರುವ ಇತರ ಬುಡಕಟ್ಟು ಸಮುದಾಯದವರನ್ನು ಅಧ್ಯಯನಕ್ಕೆ ಒಳಪಡಿಸಿಲ್ಲ.

**ಅಧ್ಯಯನದ ರೂಪರೇಷೆ:**

ಒಂದನೇ ಅಧ್ಯಾಯವು ಪೀಠಿಕೆ, ಸಮಸ್ಯೀಕರಣ, ಸಂಶೋಧನೆಯ ಉದ್ದೇಶಗಳು, ಅಧ್ಯಯನದಲ್ಲಿ ಅಳವಡಿಸಲಾದ ವಿಧಾನಗಳು ಮತ್ತು ತಂತ್ರಗಳು, ಸಾಹಿತ್ಯ ಪರಾಮರ್ಶೆ, ಊಹೆಗಳು ಮತ್ತು ಅಧ್ಯಯನದ ಇತಿಮಿತಿಗಳನ್ನು ಒಳಗೊಂಡಿದೆ. ಎರಡನೇ ಅಧ್ಯಾಯವು ಕೊರಗರ ಐತಿಹಾಸಿಕ ಮತ್ತು ಸಾಮಾಜಿಕ ಆರ್ಥಿಕ ಹಿನ್ನಲೆಯ ಕುರಿತು ವಿವರಣೆ ನೀಡುತ್ತದೆ. ಮೂರನೇ ಅಧ್ಯಾಯನವು ಕೊರಗರ ಶೈಕ್ಷಣಿಕ ಚಲನೆಯ ಮೇಲೆ ಬೆಳಕು ಚಲ್ಲುತ್ತದೆ. ನಾಲ್ಕನೇ ಅಧ್ಯಾಯದಲ್ಲಿ ಅಧ್ಯಯನದ ಸಾರಾಂಶ, ಉಪಸಂಹಾರ ಮತ್ತು ಕೆಲವು ಸಲಹೆಗಳನ್ನು ನೀಡಲಾಗಿದೆ.

ಈ ಮೇಲಿನ ಅಧ್ಯಾಯನಗಳಲ್ಲದೆ ಕೊರಗರ ಕುರಿತು ಅನುಬಂಧವನ್ನು ನೀಡಲಾಗಿದೆ. ಹಾಗೆಯೇ ಪ್ರಶ್ನಾವಳಿ, ಪದಕೋಶ, ಗ್ರಂಥ ಉಲ್ಲೇಖ ಮತ್ತು ಕೆಲವು ಅಧ್ಯಯನಕ್ಕೆ ಆಧಾರವಾಗಿರುವ ಭಾವಚಿತ್ರಗಳನ್ನು ನೀಡಲಾಗಿದೆ.

# ಅಧ್ಯಾಯ 2

## ಕೊರಗರ ಐತಿಹಾಸಿಕ ಮತ್ತು ಸಾಮಾಜಿಕ ಆರ್ಥಿಕ ಹಿನ್ನಲೆ

ಕೊರಗ ಎಂಬ ಪದವನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಕ್ಯಾಂಬೆಲ್ ಕೊರಗರನ್ನು ಕೊರ ಅಥವಾ ಕೊರಗ ಎಂದು, ಬುಚ್ಚನ್ (1988) ಕೊರರ್ ಅಥವಾ ಕೊರವರ್ ಎಂದು ಅಯ್ಯಪ್ಪನ್, ಕೊರಗ ಎಂಬ ಪದ ಕುರುವರ್ ಎಂಬ ಪದದಿಂದ ಹುಟ್ಟಿಕೊಂಡಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದರ ಅರ್ಥ ಬೆಟ್ಟದ ಮನುಷ್ಯ ತುಳುವಿನಲ್ಲಿ ಇವರನ್ನು ಕೊರಗೆ, ಕೊರಗೇರ್ ಎಂದೂ, ಕೊಂಕಣಿಯಲ್ಲಿ ಕೊರ್‌ಗೊ, ಕೊರ್‌ಗಾಂಚೆ ಎಂದೂ, ಮಲಯಾಳಂನಲ್ಲಿ ಕೊರಂ, ಕೊರ್ಗ್ ಎಂದು ಕರೆಯಲ್ಪಡುತ್ತಾರೆ.

**ಕೊರಗರ ಮೂಲ:-** ಕೊರಗರ ಮೂಲದ ಬಗ್ಗೆ ಹೆಚ್ಚು ಖಚಿತವಾದ ಮೂಲಾಧಾರಗಳು ಇಲ್ಲ. ಅಮೃತ ಸೋಮೇಶ್ವರರು ಕೊರಗರ ಮೂಲದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಪಂಗಡದಲ್ಲಿ ಹೆಚ್ಚಿನವರು ತುಳು ಭಾಷೆಯನ್ನು ಮಾತನಾಡುತ್ತಿದ್ದರು. ಇವರಿಗೆ ಇವರದ್ದೇ ಆದ ಭಾಷೆ ಇದೆ. ಭಾಷಾ ತಜ್ಞರ ಪ್ರಕಾರ ಇವರ ಭಾಷೆಯು ಉತ್ತರ ದ್ರಾವಿಡಕ್ಕೆ ಸೇರಿರುವುದಾಗಿದೆ. ಇವರು ದಕ್ಷಿಣ ಕನ್ನಡದ ಮೂಲ ನಿವಾಸಿಗಳು ಎಂಬ ಅಭಿಪ್ರಾಯವಿದ್ದರೂ, ಇವರ ಭಾಷೆಯಿಂದ ಇವರು ಪ್ರಾಚೀನ ಕಾಲದಲ್ಲಿ ಉತ್ತರದಿಂದ ವಲಸೆ ಬಂದಿರಬಹುದು ಎಂಬ ಅಭಿಪ್ರಾಯವು ಇದೆ. ಸಾವಿರಾರು ವರ್ಷಗಳ ಹಿಂದೆ ವಲಸೆ ಬಂದಿದ್ದು ಈಗ ಅವರು ಇಲ್ಲಿಯ ಮೂಲ ನಿವಾಸಿಗಳಾಗಿದ್ದಾರೆ.

ಕೊರಗರ ಅನೇಕ ಐತಿಹಾಸಿಕ ಹಿನ್ನಲೆಗಳಿವೆ. ಅನೇಕ ವಿದ್ವಾಂಸರು ಅನೇಕ ಐತಿಹ್ಯಗಳನ್ನು ಸಂಗ್ರಹಿಸಿದ್ದಾರೆ. ಆದರೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಈ ಅಭಿಪ್ರಾಯಗಳು ಐತಿಹಾಸಿಕ ಮತ್ತು ಪೌರಾಣಿಕ ವಿಷಯಗಳೆರಡನ್ನು ಒಳಗೊಂಡಿದೆ. ಈ ಎರಡು ವಿಷಯಗಳನ್ನು ನೋಡಿ, ಅವುಗಳ ಮೂಲ ಸ್ವರೂಪವನ್ನು ಕೆದಕಬಹುದಾಗಿದೆ.

### ಪೌರಾಣಿಕ ಹಿನ್ನಲೆ:

ಜನಪದ ಕಥಾ ರೂಪದಲ್ಲಿ ಮತ್ತು ಪಾಡ್ದನಗಳಲ್ಲಿ ಕೊರಗ ಜನಾಂಗದ ಕುರಿತು ಕಥೆಗಳು ಲಭ್ಯವಾಗುತ್ತವೆ. ಈ ಕಥೆಗಳ ಸಂಕ್ಷಿಪ್ತ ರೂಪ ಈ ಕೆಳಗಿನಂತಿವೆ.

ಪ್ರಪಂಚದಲ್ಲಿ ಭೂಮಿ ಎಂಬುವುದು ಇರಲಿಲ್ಲ. ಎಲ್ಲವೂ ನೀರಿನಿಂದ ತುಂಬಿ ಹೋಗಿತ್ತು. ಈ ನೀರಿನಲ್ಲಿ ಗಂಡು ಹೆಣ್ಣು ಎರಡು ಜೀವಿಗಳು ಹುಟ್ಟಿಕೊಂಡವು. ಈ ಜೀವಿಗಳೇ ಅಣ್ಣ ತಂಗಿ. ಇವರು ನೀರಿನಲ್ಲಿರುವಾಗ ದೇವರು ಮಾಯೆಯಿಂದ ಸೃಷ್ಟಿಸಿದ ಡೋಲನ್ನು ನೀರಿನಲ್ಲಿ ಬಿಟ್ಟ. ಅವರಿಬ್ಬರೂ

ಅದರೊಳಗೆ ಕುಳಿತು ರಕ್ಷಣೆ ಪಡೆದರು. ಆಗ ದೇವರು ಬಂದು ನಿಮ್ಮಿಬ್ಬರಿಗೆ ಏನು ಬೇಕು ಎಂದು ಕೇಳಿದನಂತೆ ಆಗ ಅವರು ಏನು ಬೇಡವೆಂದು ಹೇಳಿದರು. ದೇವರು ಎರಡು ಸಲ ಬಂದು ಕೇಳಿದಾಗಲೂ ಅವರಿಂದ ಅದೇ ಉತ್ತರ ದೊರಕಿತು. ಮೂರನೇ ಸಲ ದೇವರು ಬಂದು ನಿಮಗೆ ಪ್ರಪಂಚ, ಪ್ರಪಂಚದಲ್ಲಿ ಜೀವಿಗಳು ಬೇಡವೇ? ನಿಮಗೆ ಈ ಡೋಲಿನಲ್ಲಿರಲು ಬೇಸರವಾಗುವುದಿಲ್ಲವೇ? ಎಂಬ ಪ್ರಶ್ನೆಗಳಿಂದ ದೇವರು ಅವರಿಬ್ಬರಲ್ಲಿ ಆಸೆ ಹುಟ್ಟಿಸಿದ. ಆಗ ಆ ಅಣ್ಣ-ತಂಗಿಯರಿಬ್ಬರು ಒಂದಾದರು. ನಂತರ ಭೂಮಿ ಹುಟ್ಟಿ ಎಲ್ಲವೂ ನಿರ್ಮಾಣ ಆಗುತ್ತಾ ಹೋಯಿತು.

ಅಣ್ಣ-ತಂಗಿಯರ ಸಂತಾನ ಬೆಳೆಯುತ್ತಾ ಹೋಯಿತು ಮನೆ ಮಕ್ಕಳಿಂದ ತುಂಬಿತು. ಹೊಟ್ಟೆ ಪಾಡಿಗಾಗಿ ಅವರ ಮಕ್ಕಳೆಲ್ಲರು ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿದರು. ಇದೇ ವೃತ್ತಿಗಳು ಮುಂದೆ ಜಾತಿಗಳಾಗಿ ಪರಿವರ್ತನೆಗೊಂಡವು. ಈ ಜಾತಿಗಳಲ್ಲಿ ಕೆಲವು ಮೇಲು ಜಾತಿಗಳಾಗಿ ಮತ್ತು ಕೆಲವು ಕೆಳಜಾತಿಗಳಾದವು. ಕೆಳಜಾತಿಗಳಲ್ಲಿ ಇರುವವರಲ್ಲಿ ಕೊರಗರು ಅತ್ಯಂತ ಕೆಳಮಟ್ಟದಲ್ಲಿರುವವರು. ಏಕೆಂದರೆ ಇವರು ಅಣ್ಣ-ತಂಗಿಯ ಸಂಬಂಧದಿಂದ ಹುಟ್ಟಿದವರು. ಇವರು ತಮ್ಮ ಪಾಪ ಪರಿಹರಿಸಿಕೊಳ್ಳಬೇಕಾದರೆ ಮೇಲ್ಜಾತಿಯವರ ಎಂಜಲನ್ನು ತಿನ್ನಬೇಕು ಎಂದು ದೇವರು ಹೇಳಿದ್ದರೆಂಬ ನಂಬಿಕೆ ಕೊರಗರಲ್ಲಿದೆ. ಅದಕ್ಕಾಗಿ ಅವರು ತಮ್ಮ ಪಾಪ ಪರಿಹಾರಕ್ಕೆ ಬೇರೆಯವರ ಎಂಜಲನ್ನು ತಿನ್ನುವುದು ಇವತ್ತಿಗೂ ಕೊರಗರಲ್ಲಿ ನೋಡಬಹುದು.

ಇನ್ನೊಂದು ಐತಿಹಾಸಿಕ ಹಿನ್ನಲೆಯ ಪ್ರಕಾರ, ಈ ಹಿಂದೆ ಭೂಮಿಯಲ್ಲಿ ಏನು ಇರಲಿಲ್ಲ. ಪ್ರವಾಹ ಬಂದು ಬರೀ ನೀರಿನಿಂದ ತುಂಬಿಕೊಂಡಿತ್ತು. ನೀರಿನಲ್ಲಿ ಒಂದು ಮರದ ತುಂಡು ತೇಲಿಕೊಂಡಿತ್ತು. ಆ ಮರದ ತುಂಡಿನ ಆಶ್ರಯ ಪಡೆದುಕೊಂಡು ಹುಡುಗ-ಹುಡುಗಿ ಇದ್ದರು. ಪ್ರವಾಹದಿಂದ ಅವರು ಕಷ್ಟದಲ್ಲಿದ್ದರು. ಆಗ ದೇವರು ಪ್ರತ್ಯಕ್ಷನಾಗಿ ನಿಮ್ಮಿಬ್ಬರಿಗೆ ಏನು ಬೇಕು ಕೇಳಿದಾಗ ಹಸಿವಿನಿಂದ ಕಂಗಾಲಾದ ಅವರು ಯಾವ ಉತ್ತರಕೊಡಲಿಲ್ಲ. ದೇವರು ಅವರಿಗೆ ಆಹಾರಕೊಟ್ಟು ಹೋಗಿ ಮತ್ತೆ ಮೂರು ದಿವಸಗಳ ನಂತರ ಪ್ರತ್ಯಕ್ಷನಾಗಿ, ಈ ಹುಡುಗಿ ನಿನಗೆ ಏನಾಗಬೇಕು? ಎಂದು ಪ್ರಶ್ನಿಸಿದ ಆಗ ಅವನು ಸಂಕೋಚದಿಂದ ನಾವಿಬ್ಬರು ಗಂಡ-ಹೆಂಡತಿಯರಾಗಿದ್ದೇವೆ, ನಮ್ಮಗೆ ಆಶೀರ್ವಾದ ಮಾಡಿ ಎಂದನು. ದೇವರು ಅವರಿಬ್ಬರನ್ನು ಆಶೀರ್ವದಿಸಿ ಹೊರಟು ಹೋದ ತುಂಬಾ ಸಮಯದ ನಂತರ ದೇವರು ಭೂಮಿಗೆ ಬಂದಾಗ ಜಗತ್ತು ಹಸಿರಾಗಿತ್ತು, ಗಿಡಗಳು ಬೆಳೆದಿದ್ದವು, ಹೂವುಗಳು ಅರಳಿದ್ದವು, ಸುಂದರವಾದ ಹಕ್ಕಿಗಳು ಹಾರಾಡುತ್ತಿದ್ದವು. ದೇವರ ತಮ್ಮ ಕಾರ್ಯವನ್ನು ಪೂರ್ಣಗೊಳಿಸಿದ್ದರು. ಮದುವೆಯಾದ ದಂಪತಿಗಳಿಗೆ ಮುನ್ನೂರು ಮಕ್ಕಳಾಗಿದ್ದರು. ದೇವರು ನಗುತ್ತ ಆ ಮಕ್ಕಳನ್ನು ತನ್ನ ಹತ್ತಿರಕ್ಕೆ ಕರೆದು ಅವರನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿ ಪ್ರತಿ ಗುಂಪಿಗೆ ಬೇರೆ ಬೇರೆ ಕೆಲಸಗಳನ್ನು ಕರುಣಿಸಿದರು. ಈ ರೀತಿಯಲ್ಲಿ ವರ್ಣಾಶ್ರಮ ಪದ್ಧತಿ ಸೃಷ್ಟಿಯಾಯಿತು ಎಂದು ಹೇಳಲಾಗುತ್ತದೆ. ಕೊನೆಯಲ್ಲಿ ನಾಲ್ಕು ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳು

ಉಳಿದರು. ದೇವರು ಅವರಿಗೆ ನೀವು ಕೊರಗರಾಗಿ ಮತ್ತು ಆಹಾರಕ್ಕಾಗಿ ನಿಮ್ಮ ಅಣ್ಣಂದಿರನ್ನು ಆಶ್ರಯಿಸಿ ಎಂದು ಆಜ್ಞಾಪಿಸಿದನೆಂದು ಹೇಳಲಾಗುತ್ತದೆ.

ಈ ಕಥೆಗಳಿಂದ ತಿಳಿಯುವ ಅಂಶಗಳೆಂದರೆ,

1. ಕೊರಗರು ಈ ಮಣ್ಣಿನ ಮೂಲ ನಿವಾಸಿಗಳು
2. ವರ್ಣ ವ್ಯವಸ್ಥೆ ರೂಢಿಗೊಂಡದ್ದು.
3. ಡೋಲು ಕೊರಗ ಜಾತಿಯದ್ದು
4. ಬೇರೆಯವರ ಮನೆಯಿಂದ ಆಹಾರ ಸಂಗ್ರಹ ಮಾಡುವುದು.
5. ಶೋಷಣೆ ಹೇಗೆ ಆರಂಭವಾಯಿತು ಎಂಬುದು ತಿಳಿದು ಬರುತ್ತದೆ.

**ಚಾರಿತ್ರಿಕ ಹಿನ್ನಲೆ:**

ಐತಿಹಾಸಿಕ ಹಿನ್ನಲೆಯಿಂದ ತಿಳಿದು ಬಂದ ಒಂದು ವಿಚಾರ ಎಂದರೆ, ಈ ಹಿಂದೆ ಹಬಾಷಿಕ ಎಂಬುವನು ಕೊರಗರ ನಾಯಕನಾಗಿದ್ದನು. ಅವರನ್ನು ಮಯೂರ ವರ್ಮನನ್ನು ಯುದ್ಧದಲ್ಲಿ ಸೋಲಿಸಿದ. ಆದರೆ ಮಂಜೇಶ್ವರದ ಬಳಿ ನಡೆದ ಮಹಾಯುದ್ಧದಲ್ಲಿ ಮಯೂರ ವರ್ಮನ ಅಳಿಯನಾದ ಲೋಕಾದಿತ್ಯನು ಹಬಾಷಿಕನನ್ನು ಸೋಲಿಸಿ ಕಾಡಿಗೆ ಓಡಿಸಿದ, ಅಂದಿನಿಂದ ಕೊರಗರು ಕಾಡುಗಳಲ್ಲಿ ವಾಸಿಸತೊಡಗಿದರು.

ಇನ್ನೊಂದು ಮೂಲದ ಪ್ರಕಾರ, ಹಬಾಷಿಕನು ಘಟ್ಟದ ಮೇಲಿನಿಂದ ಇಳಿದು ಬಂದು ಸೈನ್ಯ ಕಟ್ಟಿದ ಅವನ ಸೈನ್ಯದಲ್ಲಿ ಕೊರಗರಿದ್ದರು. ವೀರರಾದ ಕೊರಗರು ಮಂಗಳೂರಿಗೆ ತೆರಳಿದರು. ಮಂಗಳೂರಿನಲ್ಲಿ ಹಬಾಷಿಕನಿಗೆ ಮಹಾಕಾಯಿಲೆ ಬಂದಿದ್ದರಿಂದ ಅವನು ಮಂಗಳೂರನ್ನು ಬಿಟ್ಟು ಮಂಜೇಶ್ವರಕ್ಕೆ ಹೋದ. ಅಲ್ಲಿ ವೀರ ವರ್ಮನ ಮಗ ಅಂಗಾರ ವರ್ಮನನ್ನು ಸೋಲಿಸಿ ಮುಂದೆ ಹನ್ನೆರಡು ವರ್ಷಗಳ ಕಾಲ ರಾಜ್ಯಭಾರ ಮಾಡಿದನೆಂದು ತಿಳಿದು ಬಂದಿದೆ.

ಕೆಲವು ವಿದ್ವಾಂಸರ ಪ್ರಕಾರ, ಹಬಾಷಿಕ ಕೊರಗ ಅರಸ, ಮಹಾ ವೀರ ಮತ್ತು ಶೂರ ಕೊರಗ ವೀರರನ್ನು ಒಟ್ಟು ಮಾಡಿ ಸೈನ್ಯವನ್ನು ಸಿದ್ಧಪಡಿಸಿದ. ಸ್ವತ: ಕೊರಗನಾದ ಸಬಾಷಿಕ ಜೈನನಾದ ಅಂಗಾರ ವರ್ಮನೊಂದಿಗೆ ಹೆಣ್ಣು ಕೇಳಲು ಹೋದನು. ಹಬಾಷಿಕನನ್ನು ಯುದ್ಧದಲ್ಲಿ ಸೋಲಿಸಲು ಅಸಾಧ್ಯವಾದಾಗ ಅಂಗಾರವರ್ಮ ಉಪಾಯದಿಂದ ಅವನನ್ನು ಸೋಲಿಸಿದನು.

ಮತ್ತೊಂದು ಮೂಲದ ಪ್ರಕಾರ, ಮಂಜೇಶ್ವರದ ಅಂಗಾರ ವರ್ಮನು ಹಬಾಷಿಕನನ್ನು ಮತ್ತು ಅವನ ಪಡೆಯನ್ನು ಯುದ್ಧದಲ್ಲಿ ಸೋಲಿಸಿದ್ದಲ್ಲದೇ ಅವರು ಗುಲಾಮರಾಗುವಂತೆ ಹಿಂಸಿಸಲಾಯಿತು. ಅನೇಕ ಕೊರಗ ಸೈನಿಕರನ್ನು ನಗ್ನರನ್ನಾಗಿಸಿ ಕಾಡಿಗೆ ಓಡಿಸಲಾಯಿತು. ಹಾಗೆ ಓಡಿಹೋದ ಕೊರಗರು ತಮ್ಮ ದೇಹವನ್ನು ಸೊಪ್ಪುಗಳಿಂದ ಮುಚ್ಚಿಕೊಂಡರು. ಇನ್ನೊಂದು ಅಧ್ಯಯನದ ಪ್ರಕಾರ, ಕೊರಗರಿಗೆ ಒಬ್ಬ

ಅರಸನಿದ್ದು ಅವನನ್ನು ಮುಕ್ತಾಳ ಅರಸನೆಂದೆ ಕರೆಯುತ್ತಿದ್ದರು. ಆ ಅರಸ ಮೇಲ್ಜಾತಿಯ ಹೆಣ್ಣನ್ನು ಬಯಸಿದ್ದರಿಂದ ಸಿಟ್ಟುಗೊಂಡ ಮೇಲ್ಜಾತಿಯವರು, ಕೊರಗ ಹೆಣ್ಣುಗಳು ಬಟ್ಟೆಯುಡಬಾರದೆಂದು ಕಟ್ಟಪ್ಪಣೆ ಮಾಡಿದರು. ಇದರಿಂದ ಅವಮಾನಿತರಾದ ಕೊರಗ ಹೆಂಗಸರು ತಮ್ಮ ಮಾನ ಮುಚ್ಚಿಕೊಳ್ಳಲು ನೆಕ್ಕಿ ಸೊಪ್ಪುಗಳನ್ನು ಉಪಯೋಗಿಸಬೇಕಾಯಿತು.

ಈ ಅಧ್ಯಯನಗಳಲ್ಲಿ ಗಮನಿಸಬೇಕಾದ ಅಂಶಗಳೆಂದರೆ

1. ಕೊರಗರು ಇಲ್ಲಿಯ ಮೂಲನಿವಾಸಿಗಳು ಮತ್ತು ಅರಸು ಮನೆತನಕ್ಕೆ ಸೇರಿದವರು.
2. ಅವರು ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ.
3. ಯುದ್ಧ ಸೋತದ್ದರಿಂದ ಅವರನ್ನು ಕಾಡಿಗೆ ಓಡಿಸಲಾಯಿತು.
4. ಅವರು ಗುಲಾಮರಾಗಿ, ಕೀಳು ಜಾತಿಯವರಾಗಿ ಉಳಿದವರನ್ನು ಅವಲಂಬಿಸಬೇಕಾಯಿತು.
5. ಅಸ್ಪೃಶ್ಯರೆಂದು ಕರೆಯಲ್ಪಟ್ಟ ಅವರ ಸೋಲಿಗೆ ಅಸ್ಪೃಶ್ಯತೆಯು ಒಂದು ಕಾರಣವಾಯಿತು.
6. ಅವರನ್ನು ವಿವಸ್ತ್ರಗೊಳಿಸಿ ಅವಮಾನಗೊಳಿಸಲಾಯಿತು.

**ಕೈಫಿಯತ್ತಿನ ಹಿನ್ನಲೆ:**

ಬ್ರಹ್ಮನಿಂದ ಹುಟ್ಟಿಕೊಂಡ ನಾಲ್ಕು ವರ್ಣಗಳ ನಂತರ ಆರು ಜಾತಿಗಳು ಹುಟ್ಟಿಕೊಂಡವು. ಈ ಜಾತಿಗಳಿಗೆ ಸೇರಿದಂತೆ ತಂದೆ ಬ್ರಾಹ್ಮಣ, ಕ್ಷತ್ರಿಯರಾಗಿದ್ದು, ತಾಯಿಯರು ಶೂದ್ರರಾಗಿದ್ದರು. ಅನಂತರ ಆರು ಜಾತಿಗಳನ್ನು ಸೃಷ್ಟಿಸಲಾಯಿತು. ಇವರ ತಂದೆ ವೈಶ್ಯ, ಶೂದ್ರರಾದರು. ತಾಯಿಯರು ಬ್ರಾಹ್ಮಣ, ಕ್ಷತ್ರಿಯರಾದರು. ಇವರಲ್ಲಿ ಮೂರನೆಯವರು ಚಂಡಾಲರು. ಈ ಚಂಡಾಲ ವರ್ಗದಲ್ಲಿ 15 ಜಾತಿಗಳಿದ್ದು, 15ನೇ ಜಾತಿಯೇ ಕೊರಗರು. ಇವರು ಜಾತಿ ಸ್ತರ ವಿನ್ಯಾಸದಲ್ಲಿ ಅತ್ಯಂತ ಕೆಳಗೆ ಇರುವುದರಿಂದ ಇವರನ್ನು ಅಸ್ಪೃಶ್ಯರು ಶೋಷಿತರು, ಗುಲಾಮರಂತೆ ಬದುಕುತ್ತಿದ್ದಾರೆ.

**ದಾಖಲೆಯಲ್ಲಿ ದೊರೆಯುವ ವಿಚಾರಗಳು**

1. ವರ್ಣ ವ್ಯವಸ್ಥೆ ಹೇಗೆ ಸೃಷ್ಟಿಯಾಯಿತು ಎಂಬ ವಿಷಯ ಪ್ರಸ್ತಾಪಿಸಲಾಗಿದೆ.
2. ಕೊನೆಯ ಘಟ್ಟದಲ್ಲಿ ಶೂದ್ರ ಮತ್ತು ಬ್ರಾಹ್ಮಣರ ಸಂಪರ್ಕದಿಂದ ಚಾಂಡಾಲರು ಹುಟ್ಟಿದರು. ಇದರಲ್ಲಿ 15 ಉಪವರ್ಗಗಳಿದ್ದವು. ಕೊನೆಯ ವರ್ಗದಲ್ಲಿ ಬರುವವರು ಕೊರಗರು ಎಂದು ತಿಳಿಸಲಾಗಿದೆ.

## ಸಾಮಾಜಿಕ ಹಿನ್ನಲೆ:

ಪ್ರಾಚೀನ ಕಾಲದಲ್ಲಿ ಕೊರಗರು ಪೇಟೆಗಾಗಲೀ, ಸಂತೆಗಾಗಲೀ ಬರಬೇಕಿದ್ದರೆ, ಆ ಪ್ರದೇಶದ ಗಣ್ಯ ವ್ಯಕ್ತಿಗಳ ಅನುಮತಿ ಪಡೆಯಬೇಕಾಗಿತ್ತು. ಅಲ್ಲದೇ ಸಮಾಜದಲ್ಲಿರುವ ಮೇಲ್ಜಾತಿಯವರ ಕಣ್ಣಿಗೆ ಬೀಳುವುದು ಅಶುಭ ಎನಿಸಿತ್ತು. ರಾತ್ರಿ ಹೊತ್ತಿನಲ್ಲಿ 'ಕೊರಗ' ಎಂಬ ಶಬ್ದವನ್ನು ಉಚ್ಚರಿಸುವ ವಾಡಿಕೆಯಿರಲಿಲ್ಲ. ಇವರನ್ನು ಎಷ್ಟು ಹೀನಾಯವಾಗಿ ಕಾಣುತ್ತಿದ್ದರು ಎಂದರೆ, ಇವರು ಸಾರ್ವಜನಿಕ ಸ್ಥಳದಲ್ಲಿ ಉಗುಳುವ ಹಾಗಿರಲಿಲ್ಲ. ಅದಕ್ಕಾಗಿ ಅವರು ತಮ್ಮ ಕೊರಳಿಗೆ ಗಡಿಗೆ ಅಥವಾ ಅಂಡೆಯನ್ನು ಕಟ್ಟಿಕೊಂಡು ಅದರಲ್ಲಿ ಉಗುಳಬೇಕಿತ್ತು. ರಾತ್ರಿ ಹೊತ್ತಿನಲ್ಲಿ ಅವರು ಬೇರೆಯವರೊಟ್ಟಿಗೆ ಮಾತನಾಡುವುದು ಅಶುಭ ಎಂದು ಭಾವಿಸಲಾಗುತ್ತಿತ್ತು. ಹೊಸ ಬಟ್ಟೆಗಳನ್ನು ಧರಿಸಲು ಅವರಿಗೆ ಅನುಮತಿ ಇರಲಿಲ್ಲ.

## ಕೊರಗರ ದೈಹಿಕ ಲಕ್ಷಣಗಳು ಮತ್ತು ಉಡುಗೆ ತೊಡುಗೆಗಳು:

ಕೊರಗರ ದೈಹಿಕ ಲಕ್ಷಣಗಳು ದ್ರಾವಿಡ ಜನಾಂಗಕ್ಕೆ ಹತ್ತಿರವಾಗಿದೆ. ಇವರು ಕಪ್ಪು ಮೈ ಬಣ್ಣದವರು, ಅಗಲವಾದ ಚಪ್ಪಟೆ ಮೂಗು, ಪುಟ್ಟ ಪುಟ್ಟ ಕಂಗಳು, ಅಗಲವಾದ ಹಣೆ, ಕಪ್ಪಾದ ದಟ್ಟವಾದ ಗುಂಗುರು ಕೂದಲು, ದಪ್ಪವಾದ ತುಟಿಯುಳ್ಳವರಾಗಿದ್ದು ಸುಮಾರು 5 ಅಡಿ ಎತ್ತರವಾಗಿದ್ದು ಸ್ವಲ್ಪ ಮಟ್ಟಿಗೆ ದಕ್ಷಿಣ ಭಾರತದ ಗುಡ್ಡಗಾಡು ಜನಾಂಗಗಳು ದೈಹಿಕ ಲಕ್ಷಣಗಳಿಗೆ ಹೋಲಿಸಬಹುದಾಗಿದೆ.

ಕೊರಗರ ವೇಷ ಭೂಷಣ ತುಂಬ ಸರಳ ಏಕೆಂದರೆ ಅವರು ಬಟ್ಟೆ ಧರಿಸಬಾರದೆಂಬ ನಿಷೇಧವಿರುವುದರಿಂದ ಅವರು ಕೇವಲ ಮುಂಡು ಧರಿಸುವುದು ಅಥವಾ ಸೊಪ್ಪು ಕಟ್ಟಿಕೊಳ್ಳುತ್ತಿದ್ದರು. ಇವರ ವೇಷ ಭೂಷಣದ ಬಗ್ಗೆ ಎಚ್.ವಿ.ಸುವರ್ಟ ಅವರು ತಮ್ಮ ಪುಸ್ತಕ "ಮ್ಯಾನುವಲ್ ಆಫ್ ಸೌತ್ ಕೆನರಾ" ದಲ್ಲಿ ಹೀಗೆ ಹೇಳುತ್ತಾರೆ. "ಕೊರಗರ ಸೊಂಟದಿಂದ ಕೆಳಕ್ಕೆ ಕಪ್ಪು ಬಟ್ಟೆಯನ್ನು ಸೊಂಟದಿಂದ ಮೇಲಕ್ಕೆ ಬಿಳಿಬಟ್ಟೆಯನ್ನು ಕಟ್ಟಿಕೊಳ್ಳುತ್ತಾರೆ. ತಲೆಗೆ ಅಡಿಕೆ ಹಾಳೆಯಿಂದ ಮಾಡಿದ ಟೊಪ್ಪಿ ಧರಿಸುತ್ತಾರೆ. ಕಿವಿಗೆ ಹಿತ್ತಾಳೆ ಬೆಂಡೋಲೆ, ಕೈಗಳಿಗೆ ಕಬ್ಬಿಣದ ಬಳೆ, ಸೊಂಟಕ್ಕೆ ಉಡಿದಾರ ಇರುತ್ತದೆ." ಅಲ್ಲದೇ ಸೊಂಟದಲ್ಲಿ ಬಾಗಿದ ಕತ್ತಿಯೊಂದನ್ನು ಧರಿಸಿ ಗೂಬೆಯ ಎಲುಬನ್ನು ಜೋಡಿಸಿ ತೊಂಡಕ್ ಎಂಬ ಸೊಂಟಪಟ್ಟಿಯನ್ನು ಧರಿಸುತ್ತಿದ್ದರು. ಇತ್ತೀಚೆಗೆ ಕೊರಗ ಗಂಡಸರು ಎಲ್ಲರಂತೆ ಪಂಚೆ ಮತ್ತು ಬಣ್ಣ ಬಣ್ಣದ ಅಂಗಿಗಳನ್ನು ಧರಿಸುತ್ತಿದ್ದಾರೆ. ಹಿಂದೆ ಕೊರಗ ಹೆಂಗಸರು ಮುಂಡನ್ನು ಕಟ್ಟಿ ಮೇಲೆ ರವಕೆಯನ್ನು ಧರಿಸುತ್ತಿದ್ದರು. ಇಂದಿಗೂ ಹಳ್ಳಿಯಲ್ಲಿರುವ ಕೊರಗ ಮಹಿಳೆಯರು ಇದೇ ತರಹದ ಬಟ್ಟೆಯನ್ನು ತೊಡುತ್ತಾರೆ. ಕೊರಗ ಮಹಿಳೆ ಇತರರಂತೆ ವಸ್ತ್ರ ಧರಿಸುವುದು ಅಪಶಕುನ ಮತ್ತು ಅಮಂಗಳಕರ ಎಂದು ಭಾವಿಸಲಾಗುತ್ತಿತ್ತು. ಆದರೆ ಇಂದಿನ ಆಧುನಿಕ ಸಮಾಜದ ಪ್ರಭಾವಕ್ಕೆ ಒಳಗಾಗಿರುವ ಕೊರಗರು ಎಲ್ಲರಂತೆ ಸೀರೆ ಉಡುವುದನ್ನು

ಕಲಿತಿದ್ದಾರೆ. ಅಲ್ಲದೇ ನೈಟಿ, ಸ್ಕರ್ಟ್, ಚೂಡಿದಾರ್ ಮುಂತಾದವುಗಳನ್ನು ಧರಿಸುವುದನ್ನು ನಾನು ಕಂಡಿದ್ದೇನೆ. ನಿರಾಭರಣ ಸುಂದರಿಯರಾದ ಕೊರಗರು ವಿವಿಧ ಬಗೆಯ ಮಣಿಸರಗಳ ಪ್ರಿಯರು, ಕೈಗೆ ಹಿತ್ತಾಳೆ, ಕಬ್ಬಿಣ, ತಾಮ್ರದಿಂದ ತಯಾರಿಸಿದ ಬಳೆಗಳನ್ನು ಗಂಡಸರು ಮತ್ತು ಹೆಂಗಸರಿಬ್ಬರೂ ಧರಿಸುವರು. ಆದರೆ ಈಗಿನ ಆಧುನಿಕತೆಯ ಪ್ರಭಾವದಿಂದ ಗಾಜಿನ ಬಳೆ, ಕಿವಿಯ ಓಲೆ, ಕೊರಳಿಗೆ ಸರಗಳನ್ನು ಧರಿಸುತ್ತಾರೆ.

ಕೊರಗರ ಒಳ ಪಂಗಡಗಳು

ಕೊರಗರಲ್ಲಿ ಅನೇಕ ಒಳ ಪಂಗಡಗಳಿವೆ ಅವುಗಳೆಂದರೆ

1. ಸೊಪ್ಪು ಕೊರಗರು
2. ಚಿಪ್ಪು ಕೊರಗರು
3. ಅಂಡೆ ಕೊರಗರು
4. ಮುಂಡು ಕೊರಗರು
5. ಬಾಕುಡ ಕೊರಗರು

ಈ ಪಂಗಡಗಳನ್ನು ವಿಶಿಷ್ಟ ಲಕ್ಷಣಗಳಿಂದ ಗುರುತಿಸಲಾಗುತ್ತದೆ.

1. **ಸೊಪ್ಪು ಕೊರಗರು:** ಈ ಪಂಗಡದ ಜನರು ಬಟ್ಟೆಯನ್ನು ಧರಿಸದೆ, ಮರಗಳ ಎಲೆಯನ್ನೇ ಉಪಯೋಗಿಸಿ ದೇಹವನ್ನು ಮುಚ್ಚಿಕೊಳ್ಳುವರು. 1940ರ ನಂತರ ಇವರು ಬಟ್ಟೆ ಉಡಲು ಪ್ರಾರಂಭಿಸಿದರು ಎನ್ನುವ ಹೇಳಿಕೆಗಳಿವೆ.
2. **ಚಿಪ್ಪು ಕೊರಗರು:** ತೆಂಗಿನ ಚಿಪ್ಪಿಗೆ ದಪ್ಪನೆಯ ದಾರದಿಂದ ಕಟ್ಟಿ ಬಗಲಿಗೆ ಅಥವಾ ಕುತ್ತಿಗೆಗೆ ಕಟ್ಟಿಕೊಳ್ಳುತ್ತಿದ್ದರು. ಇದನ್ನು ಅವರು ನೀರು ಕುಡಿಯಲು ಬಳಸುತ್ತಿದ್ದರು. ಇವರನ್ನು ಗೆರಟೆ ಕೊರಗ ಎನ್ನುವ ವಾಡಿಕೆ ಇದೆ.
3. **ಅಂಡೆ ಕೊರಗರು:** ಅಂಡೆ ಎಂದರೆ ಬಿದಿರಿನಿಂದ ತಯಾರಿಸಿದ ಒಂದು ಕೊಳವೆ ಅಂಡೆ ಕೊರಗರು ಈ ಅಂಡೆಯನ್ನು ದಾರದಿಂದ ಕೊರಳಿನಲ್ಲಿ ಕಟ್ಟಿಕೊಳ್ಳುತ್ತಿದ್ದರು. ಕಾರಣ ತಮ್ಮ ಉಗುಳು ನೆಲಕ್ಕೆ ಬೀಳದೆ ಆ ಅಂಡೆಯಲ್ಲಿ ಉಗಿದುಕೊಳ್ಳಬೇಕು ಎಂಬುದು ಒಂದು ಸಾಮಾಜಿಕ ವಿಧಿ. ಇತ್ತೀಚಿನ ದಿನಗಳಲ್ಲಿ ಈ ಪದ್ಧತಿ ಕಣ್ಮರೆಯಾಗಿದೆ.
4. **ಮುಂಡು ಕೊರಗರು:** ಗಂಡಸು ಮತ್ತು ಹೆಂಗಸರು ಇಬ್ಬರೂ ಸಹ ಸೊಂಟದಿಂದ ಮೊಳಕಾಲಿನವರೆಗೆ ಮಾತ್ರ ಮುಂಡು ಸುತ್ತಿಕೊಳ್ಳುತ್ತಾರೆ.

5. **ಬಾಕುಡ ಕೊರಗರು:** ಇವರು ಮೂಲತ: ಭಂಗಿ ವೃತ್ತಿ ಮಾಡುವವರು ಮೊದಲು ಕೊರಗರಲ್ಲಿ ಯಾರು ಈ ವೃತ್ತಿಯನ್ನು ಮಾಡುತ್ತಿರಲಿಲ್ಲ. ಈ ಕೆಲಸ ಮಾಡುವವರೊಂದಿಗೆ ರಕ್ತ ಸಂಬಂಧವಾಗಲಿ ಅಥವಾ ದೇಹ ಸಂಬಂಧವಾಗಲಿ ಇರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಮಹಾನಗರ ಪಾಲಿಕೆಯ ವತಿಯಿಂದ ಕೊರಗರಿಗೆ ಕೆಲಸ ಸಿಕ್ಕ ನಂತರ ಭಂಗಿ ವೃತ್ತಿ ಮಾಡತೊಡಗಿಡರು. ಈ ಕೆಲಸದಿಂದಾಗಿ ಪರಸ್ಪರ ಒಂದೇ ಉದ್ಯೋಗವಾಗಿದ್ದರಿಂದ ಬಾಕುಡರ ಜೊತೆಗೆ ಕೊರಗರ ರಕ್ತ ಸಂಬಂಧಗಳು ಪ್ರಾರಂಭವಾದವು. ಆದರೆ ಎಲ್ಲ ಕೊರಗರು ಈ ಸಂಬಂಧವನ್ನು ಒಪ್ಪುವುದಿಲ್ಲ.

**ಕೊರಗರಲ್ಲಿ ಬಳಿ ಪದ್ಧತಿ:**

ಅರವಿಂದ ಮಾಲಗತ್ತಿಯವರ ಪ್ರಕಾರ ಬಳಿಗಳು ನಾಲ್ಕು

1. ಕುಂದು ನ್ನಾಯ
2. ಸಾಲೆತ್ತನ್ನಾಯ
3. ಮುಂಜಿತ್ತೆನ್ನಾಯ
4. ಬಂಗೇರ

ಅವರೇ ಹೇಳುವ ಪ್ರಕಾರ ಬೇರೆ ಕೃತಿಗಳ ಆಧಾರದ ಮೇಲೆ ಕೊರಗರ ಬಳಿಗಳೆಂದರೆ,

1. ಮೂಂಕೆಣಾಯ
2. ತಿರ್ಗೆನ್ನಾಯ
3. ತಡ್ಜೆನ್ನಾಯ
4. ಸೋಮಣ್ಣಾಯ

ಪುರುಷೋತ್ತಮ ಬಿಳಿಮಲೆ ಅವರ ಪ್ರಕಾರ ಕೊರಗರಲ್ಲಿರುವ ಒಳ ವ್ಯತ್ಯಾಸಗಳು ಕುಲಗಳಿಗೆ ಸಂಬಂಧಿಸಿವೆ. ಬಂಧುತ್ವ ಸಮಾಜದಲ್ಲಿ ಕುಲಗಳೇ ನಿರ್ಣಾಯಕ ಸ್ಥಾನ ನಿರ್ವಹಿಸುತ್ತವೆ. ಇವರ ಪ್ರಕಾರ ಕೊರಗರಲ್ಲಿ 17 ಕುಲಗಳಿವೆ ಅವುಗಳೆಂದರೆ,

1. ಉಪ್ಪಾರು
2. ಬುಟ್ಟಾರು
3. ಕುಟ್ಟಾರು
4. ಪಡಿಯಾರು
5. ಬಜಾರು
6. ಒಡಿಯೂರು
7. ಬಂಗಾರ

8. ಎಲ್ಕಿಜಿಯರು
9. ಬುಜಿಗಾರು
10. ಹಂಟಾರು
11. ಕೊನಾರು
12. ಅಲೆರಂ
13. ಚರ್ಕಾಡಿ
14. ಮುಕ್ಕಾ
15. ಪದ್ಭಮ್ಮಿ
16. ಪಾಲಿಂ
17. ಕುಂಕರಿಣಿ.

ಇದರಲ್ಲಿ ಬಂಗಾರು ಬಳಿಯು ದಕ್ಷಿಣ ಕನ್ನಡದ ಇತರ ಜಾತಿಯಲ್ಲಿಯೂ ಕಂಡುಬರುತ್ತದೆ. ಪ್ರತಿಯೊಂದು ಕುಲಕ್ಕೂ ಪ್ರತ್ಯೇಕವಾದ ದೈವಗಳಿರುತ್ತವೆ. ಕೊರಗರಲ್ಲಿ ಮಾತೃ ಮೂಲ ಕುಟುಂಬಗಳಿರುವುದರಿಂದ ಇವರಿಗೆ ಬಳಿಗಳು ತಾಯಿಯ ಸಂಬಂಧದಲ್ಲಿ ಬರುತ್ತವೆ.

**ಕೊರಗರ ಆಹಾರ ವಿಧಿ-ನಿಷೇಧಗಳು**

ಕೊರಗರ ಪೂರ್ವಜರಲ್ಲಿ ಒಮ್ಮೆ ಅಣ್ಣತಂಗಿಯರು ಮದುವೆಯಾದ ಕಾರಣ, ಪಾಪದ ಪರಿಹಾರಕ್ಕೆ ಕೊರಗರು ಬೇರೆಯವರ ಎಂಜಲನ್ನು ತಿನ್ನುತ್ತಿದ್ದರು. ಅನೇಕ ಸಂಘಟನೆಗಳು ಇದರ ವಿರುದ್ಧ ಪ್ರತಿಭಟನೆ ಮಾಡಿದ್ದರಿಂದ ಇತ್ತೀಚೆಗೆ ಎಂಜಲು ತಿನ್ನುವ ಪದ್ಧತಿ ಕಡಿಮೆಯಾಗಿದೆ. ಕೊರಗರಲ್ಲಿ ಎಂಜಲದ ಕುರಿತು ಇರುವ ವಿಧಿ-ನಿಷೇಧಗಳು ಕುತೂಹಲಕಾರಿಯಾಗಿವೆ. ಸಾಮೂಹಿಕ, ಊಟದ ಸಂದರ್ಭದಲ್ಲಿ ಊಟ ಮಾಡುವಾಗ ಆಚಾತುರ್ಯದಿಂದ ಅನ್ನದ ಅಗಳು ಬಿದ್ದರೆ ಅಥವಾ ಇನ್ನೊಬ್ಬನ ತಟ್ಟೆಯಲ್ಲಿ ಬಿದ್ದರೆ ದಂಡದ ಜೊತೆಗೆ ಸಾಮೂಹಿಕ ಊಟವನ್ನು ಹಾಕಿಸಬೇಕಾಗುತ್ತದೆ.

ಅಣ್ಣನ ಹೆಂಡತಿ ಮೈದುನನಿಗೆ ಊಟ ಬಡಿಸಬಾರದು ಎಂಬ ನಿಯಮವಿದೆ. ಕೊರಗರು ಸತ್ತ ಪ್ರಾಣಿಗಳ ಮಾಂಸವನ್ನು ತಿನ್ನುತ್ತಾರೆ. ಇವರು ಆಮೆ ಮತ್ತು ಮೊಸಳೆಯ ಮಾಂಸವನ್ನು ತಿನ್ನುತ್ತಾರೆ. ಅಲ್ಲದೇ ಕಾಡಿನ ಗೆಡ್ಡೆ ಗೆಣಸುಗಳನ್ನು, ಹಣ್ಣು ಹಂಪಲುಗಳನ್ನು ತಿನ್ನುತ್ತಾರೆ. ಕಾಡಿನ ಜೇನು ಇವರಿಗೆ ತುಂಬಾ ಇಷ್ಟವಾದುದು. ಮಂಜೇಶ್ವರ ಗೋವಿಂದ ಪೈಗಳ ಪ್ರಕಾರ, ಕೊರಗರು ಹುಲಿ ಮಾಂಸವನ್ನು ತಿನ್ನುತ್ತಾರೆ. ಕೆಲವು ವಿದ್ವಾಸರ ಪ್ರಕಾರ, ಇವರು ಹಾವಿನ ಮಾಂಸವನ್ನು ತಿನ್ನುತ್ತಾರೆ. ಆದರೆ ಹೆಚ್ಚಿನ ಕೊರಗರು ಇದನ್ನು ಒಪ್ಪುವುದಿಲ್ಲ.

## ಕೊರಗರ ಇತರ ಜನಾಂಗಗಳೊಂದಿಗೆ ಸಂಬಂಧ:

ಕೊರಗರೊಂದಿಗಿನ ಸಂಬಂಧವನ್ನು ಸಂಪೂರ್ಣವಾಗಿ ಕಳಚಿಕೊಳ್ಳಲು ಹಿಂದೂ ಸಮಾಜಕ್ಕೆ ಸಾಧ್ಯವಾಗಲಿಲ್ಲ. ಪ್ರತ್ಯೇಕತೆಯೇ ಉಸಿರಾದ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಗುಲಾಮರಾಗಿದ್ದ ಕೊರಗರು ಇತರ ಜಾತಿಯೊಂದಿಗೆ ಸಂತೋಷದಾಯಕ ಸಂಬಂಧ ಇರಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಕೊರಗ ಮತ್ತು ಇತರ ಜಾತಿಯ ನಡುವೆ ಸಾಮಾಜಿಕ ಮತ್ತು ಸಾರ್ವಜನಿಕ ಸಂಬಂಧಗಳು ತುಂಬಾ ಕಡಿಮೆ. ಕೆಲವು ದೇವಸ್ಥಾನಗಳಲ್ಲಿ ಮತ್ತು ಪುರಾತನ ಮನೆಗಳನ್ನು ವಿಶೇಷ ದಿನಗಳಲ್ಲಿ ಕೊರಗರಿಗೆ ಎಣ್ಣೆ, ಅಕ್ಕಿ ಮೊದಲಾದವುಗಳನ್ನು ದಾನ ಮಾಡಲಾಗುತ್ತದೆ. ಕೊರಗ ಕುಲದಲ್ಲಿ ಹುಟ್ಟಿ ದೈವತ್ವಕ್ಕೇರಿದ ಕೊರಗ ತನಿಯನೆಂಬ ದೈವವನ್ನು ಇತರರು ನಂಬಿ ನಡೆದುಕೊಳ್ಳುತ್ತಾರೆ. ಕೊರಗರು ಮೇಲ್ಜಾತಿಯವರ ಉತ್ಸವಗಳಿಗೆ ಸಂಘಟಕರು ಕರೆಯಲಿ ಅಥವಾ ಕರೆಯದಿರಲಿ ಇವರು ಉತ್ಸವಗಳಿಗೆ ಹೋಗಿ ಡೋಲು ಬಾರಿಸುವುದು, ಕುಣಿಯುವುದು ಇದೆ. ಅದನ್ನು ತಾವು ಮಾಡಲೇ ಬೇಕು ಮಾಡದಿದ್ದರೆ ದೇವರಿಂದ ತಮಗೆ ಶಿಕ್ಷೆ ಸಿಗುವುದೆಂಬ ನಂಬಿಕೆ ಇವತ್ತಿಗೂ ಅವರಲ್ಲಿದೆ.

## ಕೊರಗರಲ್ಲಿ ಮನರಂಜನೆ ಮತ್ತು ಸಂಗೀತ

"ಈರಣ" ಮತ್ತು "ಕರಂಡೆ" ಎಂಬುವು ವಿಶಿಷ್ಟ ವಾದ್ಯಗಳು, ಇದಲ್ಲದೆ ಇವರ ಸಾಂಸ್ಕೃತಿಕ ಕಲಾವಂತಿಕೆಯ ಸಂಕೇತವಾಗಿ ಕೊಳಲು ಹಾಗೂ ಡೋಲು, ತಾಳ ಮತ್ತು ಚೆಂಡೆಯು ಬಳಸಲ್ಪಡುತ್ತದೆ. ಆಧುನೀಕರಣದಿಂದ ಇಂದು ಈರಣ ಮತ್ತು ಕರಂಡೆ ಕಡಿಮೆಯಾಗಿದೆ. ಕೊರಗರು ಈ ವಾದ್ಯೋಪಕರಣಗಳನ್ನು ಶುಭ ಮತ್ತು ಅಶುಭ ಸಂದರಭಗಳೆರಡಲ್ಲೂ ಬಳಸುತ್ತಾರೆ. ಸಂದರ್ಭಕ್ಕೆ ತಕ್ಕಂತೆ ಇವುಗಳ ಲಯ, ತಾಳ, ಬಡಿತಗಳಲ್ಲಿ ವ್ಯತ್ಯಾಸವಿರುತ್ತದೆ. ಕೊರಗರಲ್ಲಿ ಬಗೆಬಗೆಯ ಕುಣಿತಗಳಿವೆ.

**ಮದುವೆ:** ಕೊರಗರಲ್ಲಿ ಆದಿತ್ಯವಾರ ಶುಭದಿನ ಹೆಚ್ಚಾಗಿ ಅದೇ ದಿವಸ ಮದುವೆಯಂತಹ ಶುಭ-ಸಮಾರಂಭಗಳನ್ನು ಏರ್ಪಡಿಸಲಾಗುತ್ತದೆ. ಹಿಂದೆ ಆರು ತಿಂಗಳ ಹೆಣ್ಣು ಶಿಶುವಿಗೆ ಮದುವೆ ಮಾಡುವ ಕ್ರಮವಿತ್ತು. ಕೊರಗರಲ್ಲಿ ಒಂದೇ ಬಳಿಯೊಳಗೆ ವಿವಾಹವಾಗುವುದಿಲ್ಲ.

ಮದುವೆ ನಿಶ್ಚಿತಾರ್ಥವು ಹುಡಿಗಿಯ ಮನೆಯಲ್ಲಿ ನಡೆಯುತ್ತದೆ. ನಂತರ ಹುಡುಗಿಯ ದಿಬ್ಬನ ಹುಡುಗನ ಮನೆಗೆ ಹೋಗುತ್ತದೆ. ಮದುವೆಯ ದಿವಸ ವಧು-ವರರು ತಣ್ಣೀರಿನಲ್ಲಿ ಸ್ನಾನ ಮಾಡುತ್ತಾರೆ. ಮದುಮಗ ಭತ್ತದ ಮಡಿಯ ಮೇಲೆ, ಮದುಮಗಳು ಸ್ವಲ್ಪ ಕೆಳಗೆ ಕವುಚಿ ಹಾಕಿದ ಒಂದು ಹೆಡಿಗೆಯ ಮೇಲೆ ಕುಳಿತುಕೊಳ್ಳುತ್ತಾಳೆ. ಕೆಲವರಲ್ಲಿ ವಧುವರರು ಒಟ್ಟಿಗೆ ಚಾಪೆಯ ಮೇಲೆ ಕುಳಿತುಕೊಳ್ಳುವುದೂ ಇದೆ. ಗಂಡಿನ ಕಡೆಯ ಗುರಿಕಾರ ಹುಡುಗಿಗೆ ಕರಿಮಣಿ ಮತ್ತು ಕಾಲುಂಗುರಗಳನ್ನು ತೊಡಿಸುತ್ತಾನೆ. ವಧುವರರ ಮುಂದೆ ಸ್ವಲ್ಪ ಅಕ್ಕಿಯನ್ನಿಡುತ್ತಾರೆ. ಮೊದಲು ಗುರಿಕಾರ, ಬಳಿಕ ಗಂಡಸರು ಅವರಾದ ಮೇಲೆ ಹೆಂಗಸರೂ

ಅಕ್ಷತೆ ಹಾಕುತ್ತಾರೆ. ಮದುವೆಗೆ ಬಂದವರಿಗೆ ಊಟವು ಇರುತ್ತದೆ. ವಿನೋದಕ್ಕಾಗಿ ಡೋಲು, ಕೊಳಲು ಬಾರಿಸುತ್ತ ಗುಂಪಾಗಿ ಕುಣಿಯುತ್ತಾರೆ.

**ಸೀಮಂತ:** ಗಂಡಿನ ಮನೆಯಲ್ಲಿ ಸೀಮಂತ ನಡೆಯುತ್ತದೆ. ಹುಡುಗಿಯ ತಂದೆ ತಾಯಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಸೀರೆ-ಉಂಗುರಗಳನ್ನು ತರುತ್ತಾರೆ. ಮೊದಲು ಕುಲಭೂತಕ್ಕೆ ಬಡಿಸಿ ನಂತರ ಗರ್ಭಿಣಿಯನ್ನು ಬಡಿಸುತ್ತಾರೆ. ಆ ದಿವಸ ಮಾಡಿದ ಎಲ್ಲ ಬಗೆಯ ಪದಾರ್ಥಗಳನ್ನು ನಾದಿನಿಯರು ಗರ್ಭಿಣಿಗೆ ಉಣಿಸುತ್ತಾರೆ. ಅವಳು ಎಷ್ಟು ಬೇಕು ಅಷ್ಟು ತಿಂದ ನಂತರ ನಾದಿನಿಯರು ತಮ್ಮ ಮನೆಗೆ ಕಟ್ಟಿಕೊಂಡು ಹೋಗುತ್ತಾರೆ.

ಕೊರಗರಲ್ಲಿ ದೈವಗಳಿಗೆ ಪ್ರತ್ಯೇಕ ಪಾದ್ರಿಗಳು ಇಲ್ಲ, ಸಮಾಜದ ಗುರಿಕಾರರೇ ಸಮಾರಂಭವನ್ನು ನಡೆಸುತ್ತಾರೆ. ಇತರ ಜಾತಿಗಳಲ್ಲಿ ಆಚರಿಸುವ ಹಬ್ಬಗಳನ್ನು ಇವರು ಕೂಡ ಆಚರಿಸುತ್ತಾರೆ. ಅಷ್ಟಮಿ, ಚೌತಿಗಳನ್ನು ತಮ್ಮದೇ ಆದ ರೀತಿಯಲ್ಲಿ ಆಚರಿಸುತ್ತಾರೆ. ಕೊರಗರ ಸಮಾಜದ ಸಾಮಾಜಿಕ ಶಿಸ್ತಿನ ಕಲ್ಪನೆಯೂ ಕುತೂಹಲಕರವಾಗಿದೆ. ಗಂಡಸು ಮೊದಲ ಪತ್ನಿಯಿರುವಾಗ ಬೇರೊಂದು ವಿವಾಹವಾಗುವಂತಿಲ್ಲ. ಬೇರೆ ಗಂಡಸರು ಮನೆಗೆ ಬಂದರೆ ಅಡ್ಡಲಾಗಿ ಬಟ್ಟೆಯನ್ನು ಕಟ್ಟಿ ಆಚೆ ಬದಿಯಲ್ಲಿ ನಿಂತು ಮಾತನಾಡುವ ಪದ್ಧತಿಯಿದೆ.

ಹೆಣ್ಣು ನಡತೆಗೆಟ್ಟವಳೆಂದು ತಿಳಿದರೆ ಸಮಾಜದಲ್ಲಿ ಒಂದು ವಿಚಿತ್ರವಾದ ಪ್ರಾಯಶ್ಚಿತ ಕ್ರಮವನ್ನು ಎದುರಿಸಬೇಕಿತ್ತು. ಹೊಳೆಯ ಬದಿಯಲ್ಲಿ ಏಳು ಚಿಕ್ಕ ಬಿದಿರಿನ ಕತ್ತರಿಯಾಕಾರದ ಗುಡಿಸಲುಗಳನ್ನು ಕಟ್ಟಿ ಅವುಗಳಿಗೆ ಹುಲ್ಲು ಹೊದಿಸಿ ಗುರಿಕಾರ ಬೆಂಕಿ ಕೊಡುತ್ತಿದ್ದ. ಹೊತ್ತಿ ಉರಿಯುವ ಬೆಂಕಿಯಲ್ಲಿ ತಪ್ಪಿತಸ್ಥಳನ್ನು ಓಡಿಸುತ್ತಿದ್ದರು. ಏಳು ಸಲ ಇದೇ ರೀತಿ ಮಾಡಿದರೆ ಹೆಣ್ಣು ಶುದ್ಧವಾಗುತ್ತಾಳೆಂಬ ನಂಬಿಕೆಯವರಲ್ಲಿದೆ. ಗುಡಿಸಲು ಸುಟ್ಟು ಬೂದಿ ಮತ್ತು ಅರಿಸಿನದ ಓಕುಳಿಯನ್ನು ಅಪರಾಧಿಗಳ ಮೈಗೆ ಸಿಂಪಡಿಸಿ, ಶುದ್ಧ ಮಾಡಿ ಜಾತಿಯೊಳಗೆ ಸೇರಿಸಿಕೊಳ್ಳುತ್ತಿದ್ದರು.

ಕೊರಗರು ಅಳಿಯಕಟ್ಟು ಅಥವಾ ಮಾತೃ ಮೂಲವನ್ನು ಆಚರಿಸುತ್ತಾರೆ. ಇವರಲ್ಲಿ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಪ್ರಚಲಿತದಲ್ಲಿವೆ. ಸುಮಾರು 15-20 ಸದಸ್ಯರು ಒಟ್ಟಿಗೆ ವಾಸಿಸುವುದು ಕೊರಗರಲ್ಲಿ ಸಾಮಾನ್ಯ. ಇತ್ತೀಚೆಗೆ ವಿಭಕ್ತ ಕುಟುಂಬಗಳನ್ನು ಕೊರಗರಲ್ಲಿ ಕಾಣಬಹುದು. ಇಂತಹ ಅನೇಕ ನಂಬಿಕೆಗಳು ಮತ್ತು ಆಚರಣೆಗಳಿಂದಾಗಿ ಇವರ ಬದುಕು ಮತ್ತಷ್ಟು ಹಿಂದುಳಿಯಲು ಕಾರಣವಾಗಿದೆ.

**ಕೊರಗರ ಕಂಬಳ :**

ಕೊರಗರಿಗೆ ಸಂಬಂಧಿಸಿದ ಕಂಬಳವು ಪ್ರಧಾನವಾಗಿದೆ. ಕಂಬಳದ ಮೊದಲೇ ಇವರು ಡೋಲು ಬಡಿಯುತ್ತಾ ಇಡೀ ಊರಿನಲ್ಲಿ ಮನೆ-ಮನೆಗೂ ಕಂಬಳ ಹೇಳಿಕೆಯನ್ನು ತಲುಪಿಸುತ್ತಾರೆ. ಕಂಬಳದ ಸಂದರ್ಭದಲ್ಲಿ ಇವರ ಸಾಮೂಹಿಕ ಡೋಲು ನೃತ್ಯ ಇರುವುದನ್ನು ಕಾಣಬಹುದು.

**ಕೊರಗರ ವಾರ್ಷಿಕ ಆಚರಣೆಗಳು:**

ಕೊರಗರಿಗೆ ಆದಿತ್ಯವಾರ ತುಂಬಾ ಶುಭ ದಿನ. ಪ್ರತಿಯೊಂದು ಸಮಾರಂಭದಲ್ಲಿಯು ಅವರು ಸೂರ್ಯದೇವನಿಗೆ ಕೈ ಮುಗಿಯುತ್ತಾರೆ. ಪ್ರಕೃತಿ ಶಕ್ತಿಗಳನ್ನು ವಿಶೇಷವಾಗಿ ಗೌರವಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ತುಳುನಾಡಿನ ದೈವಗಳಾದ ಪಂಜುರ್ಲಿ, ಕಲ್ಲುರ್ಟಿ, ಜುಮಾದಿ ಮುಂತಾದವುಗಳನ್ನು ನಂಬುತ್ತಾರೆ.

ಕೊರಗರ ಅತ್ಯಂತ ಮುಖ್ಯ ದೈವ ಕೊರಗತನಿಯ ಕೊರಗ ತನಿಯನು ಕೊರಗರ ಸಾಂಸ್ಕೃತಿಕ ನಾಯಕನೂ ಹೌದು. ಪಾಡ್ದನಗಳ ಪ್ರಕಾರ ಕೊರಗ ತನಿಯ ಸಮಾಜದ ಮೇಲ್ವರ್ಗದವರಿಂದ ಕೊಲ್ಲಲ್ಪಟ್ಟ ಕೊರಗ ತನಿಯನನ್ನು ಕೊರಗೇತರರು ಆರಾಧಿಸುತ್ತಾರೆ. ಈ ದೈವಕ್ಕೆ ವರ್ಷಕ್ಕೊಮ್ಮೆ 'ಕೋಲ' ನೀಡಲಾಗುತ್ತಿದೆ. ಸಾಮಾನ್ಯವಾಗಿ ಮಾರ್ಚ್ ತಿಂಗಳಲ್ಲಿ ಬರುವ ಹುಣ್ಣಿಮೆಯ ದಿನ ಕೊರಗ ತನಿಯನ ಕೋಲ ನಡೆಯುತ್ತದೆ. ಇತರ ಭೂತಗಳಿಗೆ ಹೋಲಿಸಿದರೆ ಕೊರಗ ತನಿಯನ ಕೋಲ ತುಂಬಾ ಸರಳವಾಗಿರುತ್ತದೆ. ಮೈಗೆ ಕಪ್ಪು ಬಣ್ಣ ಮತ್ತು ಬಿಳಿ ಚುಕ್ಕೆಗಳನ್ನಿಟ್ಟು ತಲೆಗೆ 'ಮುಟ್ಟಾಳೆ', ಸೊಂಟಕ್ಕೆ ಗೆಜ್ಜೆಯ ಪಟ್ಟಿ, ಕೈಯಲ್ಲಿ ಬೆತ್ತವಿದ್ದರೆ ಕೊರಗ ತನಿಯನ ವೇಷ ಸಿದ್ಧವಾಗುತ್ತದೆ. ಕೊರಗ ತನಿಯನ ಜನ್ಮಸ್ಥಳ ಎಂದು ಹೇಳಲಾದ ದೇರಳಕಟ್ಟೆ ಮತ್ತು ಕುತ್ತಾರ್ ಪದವುನಲ್ಲಿ ಕೊರಗ ತನಿಯನ ಜಾತ್ರೆ ವಿಶೇಷವಾಗಿ ನಡೆಯುತ್ತದೆ.

**ಒಳಾಡಳಿತ ಮತ್ತು ನ್ಯಾಯ ಪದ್ಧತಿ:**

ಕೊರಗರ ಒಳಾಡಳಿತದಲ್ಲಿ ಮುಕಾರಿ ಅತ್ಯಂತ ಉನ್ನತವಾದ ಸ್ಥಾನ ಪಡೆದಿದ್ದಾನೆ. ಸಾಮಾನ್ಯವಾಗಿ ಇವನಿಗೆ ಮಾಂಡಿಕೆರೆ ಎಂಬ ಸಹಾಯಕ ಇರುತ್ತಾನೆ. ಮದುವೆ ಅಥವಾ ಭೂತದ ಕೋಲದ ಸಂದರ್ಭದಲ್ಲಿ ಈ ಬಗೆಯ ನ್ಯಾಯ ತೀರ್ಮಾನ ನಡೆಯುತ್ತದೆ. ನ್ಯಾಯ ತೀರ್ಮಾನಗಳು ಬಹುಮಟ್ಟಿಗೆ ನಂಬಿಕೆ ಮತ್ತು ಸಂಪ್ರದಾಯವನ್ನು ಆಧರಿಸಿಕೊಂಡಿವೆ. ಅರವಿಂದ ಮಾಲಗತ್ತಿ ಮತ್ತು ಒಡೆಯರ್ ಡಿ. ಹೆಗ್ಗಡೆಯವರು ವಿಚಾರಣೆಗೊಳಪಡುವ ವಿಷಯಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡುತ್ತಾರೆ. (1991: 32)

1. ಹೆಂಡತಿಯ ಒಪ್ಪಿಗೆಯಿಲ್ಲದೆ ಇನ್ನೊಂದು ಮದುವೆಯಾಗುವಂತಿಲ್ಲ
2. ಸಮುದಾಯದ ಸಮೂಹ ನೃತ್ಯದಲ್ಲಿ ಭಾಗವಹಿಸದಿರುವುದು
3. ಗಂಡು ಹೆಣ್ಣು ವ್ಯಭಿಚಾರದಲ್ಲಿ ತೊಡಗುವುದು
4. ಭಿಕ್ಷೆಗಾಗಿ ಅಥವಾ ಎಂಜಲನ್ನಕ್ಕಾಗಿ ಹಂಚಿಕೊಂಡ ಮನೆಯನ್ನು ಉಲ್ಲಂಘಿಸುವುದು.
5. ಮುಕಾರಿ ಹೇಳಿದ ಯಾವುದೇ ಕೆಲಸವನ್ನು ಮಾಡದಿರುವುದು.
6. ಸಮೂಹ ನೃತ್ಯದಲ್ಲಿ ಪಾಲ್ಗೊಳ್ಳಬೇಕು.

**ಕೊರಗರ ಭಾಷೆ:**

ದ.ಕ. ಜಿಲ್ಲೆಯಲ್ಲಿರುವ ಕೊರಗರು ಇವತ್ತು ಸಾಮಾನ್ಯವಾಗಿ ತುಳುವಿನಲ್ಲಿ ಮಾತನಾಡುತ್ತಾರೆ. ಆದರೆ ಇವರಿಗೆ ಇವರದ್ದೇ ಆದ ಸ್ವತಂತ್ರ ಭಾಷೆ ಇದೆ. ಇದರ ಬಗೆಗಿನ ಸಂಶೋಧನೆ ಮಾಡಿದ ಡಿ.ಎನ್.ಎಸ್. ಭಟ್ (1971) "ಕೊರಗ ಭಾಷೆಯು ದ್ರಾವಿಡ ವರ್ಗದ ಸ್ವತಂತ್ರ ಭಾಷೆಯಾಗಿದ್ದು, ಅದು ಮೂರು ಉಪಭಾಷಾ ಸ್ವರೂಪಗಳನ್ನು ಹೊಂದಿದೆ. ಎಂದು ಹೇಳಿದ್ದಾರೆ ಶಂಕರ್ ಭಟ್ ಅವರ ಪ್ರಕಾರ, "ಕೊರಗರ ಉಪಭಾಷೆಗಳೆಂದರೆ, ಒಟಿಟ ಕೊರಗ, ತಪ್ಪು ಕೊರಗ ಮತ್ತು ಮೂಡು ಕೊರಗ" ಕೊರಗರು ತಮ್ಮ ಕೊರಗ ಭಾಷೆಯನ್ನು 'ಪೊಟ್ಟು ಭಾಷೆ' ಎಂದು ಕರೆಯುತ್ತಾರೆ.

**ಕೊರಗರ ಸಾಹಿತ್ಯ:**

ಕೊರಗರ ಭಾಷೆಯಲ್ಲಿರುವ ಸಾಹಿತ್ಯದ ಸಂಗ್ರಹ ಇದುವರೆಗೆ ನಡೆದಿಲ್ಲ. ಸಮೀಕ್ಷೆಯ ಪ್ರಕಾರ ಕೊರಗ ಭಾಷೆಯಲ್ಲಿ ಹೇರಳವಾದ ಜನಪದ ಕತೆಗಳಿವೆ. ಆದರೆ ಇವುಗಳ ಪ್ರತ್ಯೇಕ ಅಧ್ಯಯನ ನಡೆಯಬೇಕಾಗಿದೆ. ತುಳುನಾಡಿನಲ್ಲಿ ಜನಪ್ರಿಯವಾಗಿರುವ ಪಾಡ್ದನಗಳು ಕೊರಗರಲ್ಲಿಯೂ ಲಭ್ಯವಿದೆ. ವಿಶೇಷವಾಗಿ ಕೊರಗತನಿಯನ ಪಾಡ್ದನ ಪ್ರಚಲಿತದಲ್ಲಿದೆ. ಉಳಿದಂತೆ ಕವಿತೆ, ಉರಲ್ ಮತ್ತು ಶಿಶು ಪ್ರಾಸಗಳು ಕೊರಗರಲ್ಲಿ ಪ್ರಚಲಿತದಲ್ಲಿವೆ.

**ಸಾಮಾಜಿಕ ಸಮಸ್ಯೆಗಳು:**

ಕೊರಗರಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ಇದೆ. ಒಂದೇ ಕುಟುಂಬದಲ್ಲಿ ಸುಮಾರು 20-22 ಸದಸ್ಯರು ಒಟ್ಟಿಗೆ ಒಂದೇ ಮನೆಯಲ್ಲಿ ವಾಸಿಸುವಾಗ ವಸತಿ ಸೌಕರ್ಯದ ಸಮಸ್ಯೆ ಹೆಚ್ಚಾಗಿರುತ್ತದೆ. ನಾಗರಿಕ ಸಮಾಜದಲ್ಲಿ ವಿಭಕ್ತ ಕುಟುಂಬಗಳಿಗೆ ಹೆಚ್ಚಿನ ಮಹತ್ವವಿದೆ. ಆದ್ದರಿಂದ ಹಲವು ಯೋಜನೆಗಳ ಅಡಿ ಕೊರಗರಿಗೆ ಪ್ರತ್ಯೇಕ ವಸತಿ ಸೌಲಭ್ಯವನ್ನು ಒದಗಿಸಿದ್ದರೂ ಅದರ ಲಾಭವನ್ನು ಪಡೆದುಕೊಂಡಿಲ್ಲ. ಏಕೆಂದರೆ ಅವಿಭಕ್ತ ಕುಟುಂಬವಾಗಿಯೇ ಇರಬೇಕೆಂಬುವುದು ಅವರ ನಂಬಿಕೆ.

ಕೊರಗರಲ್ಲಿ ಮಾತೃ ಮೂಲ ಕುಟುಂಬಗಳಿಗೆ ಹೆಚ್ಚಿನ ಮಹತ್ವವಿದೆ. ಮಾತೃ ಮೂಲ ಕುಟುಂಬಗಳಿಗೆ ಒಳಗಾದ ಕೊರಗ ಕುಟುಂಬಗಳು ಪಿತೃಮೂಲ ಕುಟುಂಬಗಳ ವ್ಯವಸ್ಥೆಯ ನಿಯಮಾಚರಣೆಗಳನ್ನು ಅರಿಯುವುದರಿಂದ ಸಮಸ್ಯೆಗೊಳಗಾಗುತ್ತಿದ್ದಾರೆ. ಆದ್ದರಿಂದ ಸರ್ಕಾರದ ಸವಲತ್ತುಗಳು ಅರ್ಥ ಹೀನವಾಗುತ್ತಿವೆ.

ಶಿಕ್ಷಣ ವ್ಯವಸ್ಥೆಗೆ ಸಂಬಂಧಿಸಿದಂತೆ ಕೊರಗರಲ್ಲಿ ಹೊಸ ಸಮಸ್ಯೆಗಳು ಹುಟ್ಟಿಕೊಂಡಿವೆ. ಈ ಸಮಾಜದಲ್ಲಿ ಕೆಲವರ ಮನೆತನಗಳು ಸ್ವಲ್ಪ ಮುಂದುವರಿದಿದ್ದು, ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು

ಪಡೆದಿದ್ದಾರೆ. ಬಳಿ ಪದ್ಧತಿಯ ಸಂಬಂಧಗಳು ಇರುವುದರಿಂದ ಒಂದೇ ಬಳಿಯವರು ಶಿಕ್ಷಣವನ್ನು ಪಡೆದಾಗ ಆ ಕುಟುಂಬದೊಂದಿಗೆ ರಕ್ತ ಸಂಬಂಧ ಬೆಳೆಸುವುದಕ್ಕೆ ಮನಸ್ಸು ಮಾಡದಿರುವುದು ಕಂಡು ಬರುತ್ತದೆ. ಕಲಿತ ಮಗಳನ್ನು ಯಾರಿಗೆ ಕೊಟ್ಟು ಮದುವೆ ಮಾಡಬೇಕು ಎಂಬುದು ತಂದೆಯ ಚಿಂತೆಯಾದರೆ, ಕಲಿತ ಹೆಣ್ಣು ತಂದು ಸಾಕುವ ಸಾಮರ್ಥ್ಯ ನಮಗಿದೆಯೇ? ಎಂಬುದು ಮತ್ತೊಂದು ಕುಟುಂಬದ ಸಮಸ್ಯೆಯಾಗಿದೆ.

ಕ್ಷೇತ್ರ ಕಾರ್ಯದಲ್ಲಿ 105 ಮನೆಗಳನ್ನು ಸಮೀಕ್ಷೆ ಮಾಡಿ ಸಮಾಜಿಕ ಮಾಹಿತಿ ಮತ್ತು ಪೋಷಕರ ವಯಸ್ಸನ್ನು ತಿಳಿದುಕೊಳ್ಳಲಾಯಿತು. ಕೆಳಗಿನ ಕೋಷ್ಟಕದಲ್ಲಿ ಅದನ್ನು ವಿವರಿಸಲಾಗಿದೆ.

**ಕೋಷ್ಟಕ –2.1**

**ಕುಟುಂಬದ ಮುಖ್ಯಸ್ಥನ ವಯಸ್ಸು**

| ಮುಖ್ಯಸ್ಥನ ವಯಸ್ಸು | ಸಂಖ್ಯೆ | ಶೇಕಡಾವಾರು |
|---|---|---|
| 20-30 | 16 | 15.25 |
| 31-40 | 38 | 36.19 |
| 41-50 | 29 | 27.61 |
| 50ಕ್ಕಿಂತ ಮೇಲ್ಪಟ್ಟು | 22 | 20-95 |
| ಒಟ್ಟು | 105 | 100.00 |

ಕೋಷ್ಟಕ 1 ರಲ್ಲಿ ಪೋಷಕರ ವಯಸ್ಸನ್ನು ದತ್ತಾಂಶಗಳಿಂದ ಸಂಗ್ರಹಿಸಲಾಗಿದೆ. 31-40 ವಯಸ್ಸಿನ ಪೋಷಕರ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಎಂದರೆ ೩೮ ಜನರನ್ನು 20-30 ಪೋಷಕರಲ್ಲಿ 16 ಪೋಷಕರನ್ನು ಸಂದರ್ಶಿಸಲಾಯಿತು.

**ಆರ್ಥಿಕ ಹಿನ್ನಲೆ:**

ಹಸಿವು, ಬಡತನ, ಅಸ್ಪೃಶ್ಯತೆ, ಅವಮಾನ ಎಂಬುದು ಮನುಷ್ಯನ ಆತ್ಮವಿಶ್ವಾಸ, ಅಂತ:ಶಕ್ತಿ, ವಿವೇಚನಾ ಶಕ್ತಿ, ಚೈತನ್ಯವನ್ನು ಅಡಗಿಸಿ ನಿಸ್ತೇಜನನ್ನಾಗಿರಿಸಿ ನೇರ ದಾಸ್ಯಕ್ಕೆ ತಳ್ಳಬಹುದು. ಕರಾವಳಿ ಕರ್ನಾಟಕದಲ್ಲಿ ಅತ್ಯಂತ ಘೋರವಾದ ಶೋಷಣೆಯನ್ನು ಉಂಡು ಸಾಮಾಜಿಕ ದಾಸ್ಯಕ್ಕೆ ತಳ್ಳಲ್ಪಟ್ಟ ಕುಲ ಎಂದರೆ ಕೊರಗರು ಮಾತ್ರ ಎಂದು ಗುರುತಿಸಲ್ಪಟ್ಟಿದ್ದಾರೆ.

ಕೊರಗರು ಹಿಂದಿನ ಕಾಲದಲ್ಲಿ ನಾಡಿನಲ್ಲಿ ವಾಸಿಸುತ್ತಿದ್ದರು. ಅವರನ್ನು ಕಾಡಿಗೆ ಅಟ್ಟಲಾಯಿತು. ಇವತ್ತಿನ ಆಧುನಿಕ ಸಮಾಜದಲ್ಲಿಯೂ ಕೊರಗರು ಸಾಮಾನ್ಯವಾಗಿ ಊರ ಹೊರಗಡೆ ಗುಂಪಾಗಿ ವಾಸಿಸುವುದನ್ನು ಕಾಣಬಹುದು. ಬಡತನದಲ್ಲಿರುವ ಕೊರಗರು ಸಮಾಜಕ್ಕೆ ಒಪ್ಪಿಗೆಯಾಗುವ, ಘನತೆ ತರುವ ಜೀವನ ಮಟ್ಟ ಸಿಗುವುದು ಸಾಧ್ಯವಿಲ್ಲ. ಅಲ್ಪ ಆದಾಯಯದ ಜನಕ್ಕೆ ಅಸ್ತಿತ್ವವೇ ಹೋರಾಟವಾಗುವುದು. ಇವರಿಗೆ ತಮ್ಮದೇ ಆದ ಮನೆ, ಭೂಮಿ, ನೀರಿನ ಸೌಲಭ್ಯವಿಲ್ಲ. ಅನಾರೋಗ್ಯದಲ್ಲಿ ಆಸ್ಪತ್ರೆಗೆ ಹೋಗಬೇಕೆಂಬ ಸಾಮಾನ್ಯ ಅರಿವಿನ ಕೊರತೆ ಇವರಲ್ಲಿ ಕಾಣಬಹುದು.

ಶತಮಾನಗಳಿಂದ ಕೊರಗರು ಗುಲಾಮರಾಗಿಯೇ ಕೆಲಸ ಮಾಡಿಕೊಂಡು ಬಂದಿದ್ದಾರೆ. ಹಿಂದಿನ ಕಾಲದಲ್ಲಿ ಅವರನ್ನು ಬಹಿರಂಗವಾಗಿ ಮಾರಿಕೊಳ್ಳಲಾಗುತ್ತಿತ್ತು. ಉಳ್ಳವರ ಅಂಗಳದಲ್ಲಿ ಜೀತವನ್ನು, ಅಜಲಿನ ಚಾಕರಿಯನ್ನು ಮಾಡಿಕೊಂಡಿದ್ದ ಕೊರಗರನ್ನು ತೀರಾ ಹೀನ ಜಾತಿಯ ಅಸ್ಪೃಶ್ಯರು ಎಂಬ ಕಾರಣಕ್ಕಾಗಿ ಭೂಮಾಲೀಕರು ಕೃಷಿ ಕೆಲಸಕ್ಕೂ ಸೇರಿಸಿಕೊಳ್ಳುತ್ತಿರಲಿಲ್ಲ. ಆದ್ದರಿಂದ ಕೃಷಿ ಕ್ಷೇತ್ರದ ನೈಪುಣ್ಯತೆಯು ಅವರಿಗೆ ದೊರಕಲಿಲ್ಲ. ಕಾಡಲ್ಲಿ ದೊರೆಯುವ ವಿವಿಧ ಬಿದಿರು, ಬೀಳಲು, ಬೆತ್ತಗಳನ್ನು ಬಳಸಿಕೊಂಡು ಬುಟ್ಟಿ, ಮೊರ, ತೊಟ್ಟಿಲು, ಕುತ್ತರಿಗಳನ್ನು ತಯಾರಿಸಿಕೊಂಡು ಜೀವನ ನಿರ್ವಹಣೆಗೆ ದಾರಿ ಕಂಡುಕೊಂಡಿದ್ದರು. ಕಾಡಿನ ಉತ್ಪನ್ನಗಳಾದ ಜೇನು, ಮೇಣ, ಔಷಧೀಯ ಬೇರು, ನಾರು, ತೊಗಟೆ, ಹಣ್ಣುಗಳು ಕೂಡ ಅವರ ಹೊಟ್ಟೆಗಷ್ಟು ಗಂಜಿ ತಿಳಿಯನ್ನು ಒದಗಿಸುತ್ತಿದ್ದವು. ಆದರೆ ಸ್ವತಂತ್ರ್ಯ ನಂತರ ಕೈಗಾರೀಕರಣಕ್ಕೆ ಹೆಚ್ಚಿನ ಒತ್ತು ಕೊಡತೊಡಗಿದಾಗ ಕಾಡು ನಾಶ ಮಾಡುವ ಪ್ರಕ್ರಿಯೆ ಆರಂಭಗೊಳ್ಳ ತೊಡಗಿತು. ಕಾಡು ನಾಶವಾಗಿ ಕಾಂಕ್ರೀಟ್ ಕಾಡುಗಳು ನಿರ್ಮಾಣವಾಗ ತೊಡಗಿದಾಗ ಅತ್ತ ಕಾಡು ಇಲ್ಲದೆ, ಇತ್ತ ಸ್ವಂತ ಭೂಮಿಯೂ ಇಲ್ಲದೇ ಕೊರಗರ ಬದುಕು ಅಧೋಗತಿಗಿಳಿಯಿತು.

ಊರ ಪ್ರಮುಖರು, ಉಳ್ಳವರು, ಮರಣ ಹೊಂದಿದರೆ ಸಾಕು ಅಜಲಿನ ಮುದರ ಡೋಲು ಬಾರಿಸುತ್ತ ಊರವರಿಗೆ ಮರಣ ಸೂಚನೆ ನೀಡುವದು. ಸಾವು ಸಂಸ್ಕಾರದ ದಿನದವರೆಗೂ ಈ ಸಾವಿನ ಡೋಲು ಮುಂದುವರಿಯುತ್ತದೆ. ಊರಿಗೆ ಹಬ್ಬ-ಹರಿದಿನ, ಜಾತ್ರೆ, ಕೋಲ, ಕಂಬಳ, ನೇಮ, ಮಾರಿಪೂಜೆಯ ಸಂಭ್ರಮ ಏರಲಿದೆ ಎಂದರೆ, ಸಾಕು ಅಜಲಿನ ಮುದರ ಎರಡು ದಿನಕ್ಕಿಂತ ಮುಂಚೆಯೇ ತನ್ನ ಪಡೆಯೊಂದಿಗೆ ಹೆಣ ಭಾರದ ಡೋಲನ್ನು ಕೊರಳಿಗೇರಿಸಿಕೊಂಡು ಕೊಳಲೂದಿಕೊಂಡು ಊರಿಡೀ ಸುತ್ತುವುದು, ಊರಿನವರಿಗೆ ಹಬ್ಬ-ಉತ್ಸವದ ಮರ್ಯಾದೆಯನ್ನು ಸಲ್ಲಿಸುವುದರ ಜತೆಗೆ ತನ್ನ ದುಡಿಮೆಗೆ ತಕ್ಕ ಪ್ರತಿಫಲವನ್ನು ಊರ ಮನೆಯವರಿಂದ ತಾನೇ ಬೇಡಿ ಪಡೆಯಬೇಕು.

ಇಂದು ಕೊರಗರು ಬುಟ್ಟಿ ಹೆಣೆಯುವುದನ್ನು ಮುಖ್ಯ ಉದ್ಯೋಗವಾಗಿಸಿ ಕೊಂಡಿದ್ದಾರೆ. ತುಳುವಿನಲ್ಲಿ ಬುಟ್ಟಿ ಹೆಣೆಯುವುದನ್ನು ಮುಡೆಬ್ಬೆಲ್ ಎನ್ನುತ್ತಾರೆ. ಕೊಜಂಬೆ, ಎಲಿಬೂರು, ಇಲ್ಲಬೂರು, ಚೆನ್ನೆ, ಬೂರು ಮಾದೆರಿಬೂರು ಮುಂತಾದ ಬೀಳಲುಗಳಿಂದ ವಿವಿಧ ಗಾತ್ರದ ಬುಟ್ಟಿಗಳು, ತೊಟ್ಟಿಲು, ಗರಸೆ, ಕಳಸಿಗೆ, ಪೆಟ್ಟಿಗೆ ಮೊದಲಾದವುಗಳನ್ನು ಸಿದ್ಧಗೊಳಿಸುತ್ತಾರೆ. ಹೀಗೆ ತಯಾರಿಸಿದ ವಸ್ತುಗಳನ್ನು ಕೃಷಿಕರಿಗೆ

ಮಾರುತ್ತಾರೆ. ಈ ಬುಟ್ಟಿಗಳಿಗೆ ಕೆಲವೊಮ್ಮೆ ಹಣದ ರೂಪದಲ್ಲಿ ಅಥವಾ ವಸ್ತುಗಳ ರೂಪದಲ್ಲಿ ಹಣ ಸಂದಾಯ ಮಾಡಲಾಗುತ್ತದೆ. ಕೊರಗರ ಬುಟ್ಟಿಗಳಿಗೆ ನ್ಯಾಯೋಚಿತವಾದ ಬೆಲೆ ಸಿಕ್ಕುವುದಿಲ್ಲ. ಕೃಷಿಕರು ಕೊಟ್ಟಷ್ಟು ಕೊರಗರು ಪಡೆದಷ್ಟೇ ಬೆಲೆ ಹೀಗಾಗಿ ಹಿಂದಿನ ಕಾಲದಲ್ಲಿ ಇವರದ್ದು ಕಡು ಬಡತನದ ಜೀವನವಾಗಿತ್ತು. ಇಂದು ಕೃಷಿಕರು ಬುಟ್ಟಿಗಳನ್ನು ಬಳಸುವುದಿಲ್ಲ. ಆದ್ದರಿಂದ ಮಾರುಕಟ್ಟೆಯಲ್ಲಿ ಕೊರಗರ ಉತ್ಪನ್ನಗಳಿಗೆ ಬೆಲೆಯಿಲ್ಲ. ಇಂದು ಕೊರಗರ ಬುಟ್ಟಿಯನ್ನು ಮುಸ್ಲಿಂ ವ್ಯಾಪಾರಿಗಳು ಅತ್ಯಂತ ಕಡಿಮೆ ಬೆಲೆಯಲ್ಲಿ ಖರೀದಿಸಿ ಪಟ್ಟಣಗಳಲ್ಲಿ ಒಳ್ಳೆಯ ಬೆಲೆಗೆ ಮಾರಿಕೊಳ್ಳುತ್ತಿದ್ದಾರೆ. ಹಾಗಾಗಿ ಇಂದಿಗೂ ಕೂಡಾ ಇವರು ವ್ಯಾಪಾರಸ್ಥರಿಂದ, ಶ್ರೀಮಂತ ವರ್ಗದವರಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ.

ಹಿಂದುಳಿದ ಮತ್ತು ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿರುವ ಕೊರಗರ ಜೀವನ ಚಿಂತಾಜನಕವಾಗಿದೆ. ಅವರಿಗೆ ಬೆತ್ತದ ಕೆಲಸ ಬಿಟ್ಟರೆ ಬೇರೆ ಕೆಲಸಗಳು ಅಷ್ಟಾಗಿ ಗೊತ್ತಿಲ್ಲ. ಆದ್ದರಿಂದ ಇವರು ತಮ್ಮ ಕುಲ–ಕಸುಬನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅವರು ತಯಾರಿಸಿದ ಬುಟ್ಟಿಗಳಿಗೆ ಬೆಲೆ ಇಲ್ಲ ಆದರೂ ಕೆಲವೊಬ್ಬರು ಸ್ವಂತ ಉದ್ಯೋಗವನ್ನು ನಂಬಿಕೊಂಡು ಜೀವನ ನಡೆಸುತ್ತಿದ್ದಾರೆ. ಇನ್ನೂ ಕೆಲವರು ಕೂಲಿ, ಆಸ್ಪತ್ರೆಗಳಲ್ಲಿ ಮತ್ತುಹಾಸ್ಟೆಲ್‌ಗಳಲ್ಲಿ ಸ್ವಚ್ಛತೆಯ ಕೆಲಸಗಳಲ್ಲಿ ನಿರತರಾಗಿದ್ದಾರೆ. ಕೆಲವು ಕೊರಗರು ಮುನ್ಸಿಪಾಲಿಟಿಗಳಲ್ಲಿ ಕೆಲಸದಲ್ಲಿದ್ದಾರೆ. ಇವರಲ್ಲಿ ಬೆರಳೆಣಿಕೆಯಷ್ಟು ಜನರು ಒಳ್ಳೆಯದಲ್ಲಿದ್ದು ಉತ್ತಮ ಜೀವನವನ್ನು ನಡೆಸುತ್ತಿದ್ದಾರೆ. ಹೆಚ್ಚಿನವರು ಕೆಳದರ್ಜೆಯ ಕೆಲಸಗಳಲ್ಲಿ ನಿರತರಾಗಿದ್ದಾರೆ.

ಕೋಷ್ಟಕ –2 ರಲ್ಲಿ ಕೊರಗರ ವಾರ್ಷಿಕ ಆದಾಯದ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು ನೀಡಲಾಗಿದೆ.

**ಕೋಷ್ಟಕ –2.2**

**ಪೋಷಕರ ವಾರ್ಷಿಕ ವರಮಾನ**

| ವರಮಾನ | ಒಟ್ಟು | ಶೇಕಡಾ |
|---|---|---|
| 20,000-30,000 | 39 | 37.14 |
| 30,000-40,000 | 52 | 49.53 |
| 40,000-50,000 | 06 | 5.71 |
| 50,000 ಕ್ಕಿಂತ ಹೆಚ್ಚು | 08 | 7.62 |
| **ಒಟ್ಟು** | **105** | **100.00** |

ಕೊರಗರ ವಾರ್ಷಿಕ ವರಮಾನವನ್ನು ಅಂಕಿ ಅಂಶಗಳು ಮತ್ತು ದತ್ತಾಂಶಗಳಲ್ಲಿ ಗಮನಿಸಿದಾಗ 52% ರಷ್ಟು ಪೋಷಕರು 30,000 ದಿಂದ 40,000 ರೂ. ವಾರ್ಷಿಕ ವರಮಾನದಲ್ಲಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ 8% ಪೋಷಕರ 50,000 ಕ್ಕಿಂತ ಹೆಚ್ಚು ವರಮಾನವಾಗಿದ್ದಾರೆ. ಸರಕಾರಿ

ಉದ್ಯೋಗದಲ್ಲಿರುವವರು ಸಂಖ್ಯೆ ತುಂಬಾ ಕಡಿಮೆ ಕೊರಗರು ಆರ್ಥಿಕವಾಗಿ ತುಂಬಾ ಹಿಂದುಳಿದ್ದು ಅತ್ಯಂತ ಕಷ್ಟಕರ ಜೀವನವನ್ನು ನಡೆಸುತ್ತಿದ್ದಾರೆ. ಆದ್ದರಿಂದ ಕೊರಗರಲ್ಲಿ ಶಿಕ್ಷಣ, ಆರೋಗ್ಯ, ಸ್ವಚ್ಛತೆಯ ಕೊರತೆಗಳನ್ನು ಹೆಚ್ಚಾಗಿ ನೋಡಬಹುದು.

**ಆರ್ಥಿಕ ಸಮಸ್ಯೆಗಳು:**

ಕೊರಗರು ಆರ್ಥಿಕವಾಗಿ ಶೋಷಿಸಲ್ಪಟ್ಟವರು ಮತ್ತು ಶೋಷಿಸಲ್ಪಡುವವರು ಕೊರಗರ ಆರ್ಥಿಕ ಸಮಸ್ಯೆಗಳು ಅವರ ಸಾಮಾಜಿಕ ಮತ್ತು ಸಾಂಸ್ಕೃತಿಯ ಹಿಂದುಳಿದಿರುವಿಕೆಗೂ ಕಾರಣವಾಗಿದೆ. ಕೊರಗರ ಸರ್ವಾಂಗೀಣ ಅಭಿವೃದ್ಧಿಯಾಗಬೇಕಾದರೆ, ಕೊರಗರು ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕು. ಆರ್ಥಿಕ ಸಮಸ್ಯೆಗಳಾದ ನಿರುದ್ಯೋಗ, ಅರೆ-ನಿರುದ್ಯೋಗ, ವಸತಿ-ಹೀನತೆ, ನಿರಕ್ಷರತೆ, ಅನಾರೋಗ್ಯ, ನಾಗರಿಕ ಸವಲತ್ತುಗಳು ಇತ್ಯಾದಿ ಈ ಸಮಸ್ಯೆಗಳಿಗೆ ಸರಕಾರ ಪರಿಹಾರಗಳನ್ನು ರೂಪಿಸಬೇಕಾಗಿದೆ. ಕೊರಗರ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಸುಧಾರಿಸಲು ಹಲವು ಯೋಜನೆಗೆಳು ರೂಪುಗೊಂಡಿವೆ. ಉದಾ:1994 ರಿಂದ ಕೊರಗರು ನಡೆಸುತ್ತಿರುವ ಭೂಮಿ ಚಳುವಳಿ ಕಾರಣದಿಂದ ಹಾಗೂ ಮಹಮ್ಮದ್ ಪೀರ್ ಅವರ ವರದಿಯನ್ನಾಧರಿಸಿ, ಸರ್ಕಾರಿ ಸ್ವಾಮ್ಯದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ಕೊರಗರಿಗೆ ಪುನರ್ ವಸತಿ ಯೋಜನೆಗಳನ್ನು ಕೈಗೆತ್ತಿಕೊಂಡಿತ್ತು. ಅಸ್ಪೃಶ್ಯತೆ ಅವಮಾನದಿಂದ ಬಳಲಿ ನಿಸ್ತೇಜರಾಗಿದ್ದ. ಕಾಲವೀಗ ಬದಲಾಗಿದೆ. ಕೊರಗರಲ್ಲಿ ಪ್ರಖರವಾದ ಸಮಾಜವಾದಿ ಚಿಂತನೆ ನಿಸ್ವಾರ್ಥಿ ನಾಯಕತ್ವವುಳ್ಳ ನಿಖರ ವೈಚಾರಿಕ-ಸೈದ್ಧಾಂತಿಕ ಸ್ಪಷ್ಟತೆಯುಳ್ಳ ನಾಯಕರು ಉದಯಿಸಿದ್ದಾರೆ. ಧ್ವನಿಯಿಲ್ಲದ ಕೊರಗರಿಗೆ ಧ್ವನಿಯಾಗಿ, ಸ್ಪಷ್ಟ ಸೈದ್ಧಾಂತಿಕ ಹೋರಾಟದ ದಾರಿ ತೋರಿಸುತ್ತ ಅವರ ಅಭಿವೃದ್ಧಿಗಾಗಿ ಸತತ ಶ್ರಮಿಸುವ ಪ್ರಗತಿಪರ ಸಮಾಜವಾದಿ ಚಿಂತಕರು ಹಾಗೂ ಸಂಸ್ಥೆಗಳು ಅವರ ಬೆಂಗಾವಲಾಗಿವೆ.

ಈ ಮೇಲಿನ ಅಧ್ಯಯನದಿಂದ ಕೊರಗರು ಕಷ್ಟಕರವಾದ ಜೀವನವನ್ನು ನಡೆಸುತ್ತಿದ್ದು, ಮೂಢನಂಬಿಕೆಗಳು, ಆಚರಣೆಗಳು ಮತ್ತು ನಂಬಿಕೆಗಳಿಂದ ಇನ್ನೂ ಹೊರಬಂದಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಕೊರಗರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣಗಳು ಮತ್ತು ಪರಿಹಾರಗಳನ್ನು ಸೂಚಿಸಲು ಪ್ರಯತ್ನಿಸಲಾಗಿದೆ.

# ಅಧ್ಯಾಯ 3

# ಕೊರಗರಲ್ಲಿ ಶೈಕ್ಷಣಿಕ ಚಲನೆ:

## ಶೈಕ್ಷಣಿಕ ಹಿನ್ನಲೆ:

ಭಾರತ ಪ್ರಜಾಪ್ರಭುತ್ವ ರಾಷ್ಟ್ರ. ಸಂವಿಧಾನದಲ್ಲಿ ಎಲ್ಲಾ ಜನಾಂಗದವರಿಗೆ ಸಮಾನವಾದ ಅವಕಾಶಗಳನ್ನು ಕಲ್ಪಿಸಲಾಗಿದೆ. ಶಿಕ್ಷಣದ ಸೌಲಭ್ಯಗಳನ್ನು ಎಲ್ಲರೂ ಪಡೆದುಕೊಳ್ಳಬಹುದು. ಆದಿವಾಸಿಗಳು ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದ್ದರಿಂದ ಸರ್ಕಾರ ಅವರ ಉದ್ಧಾರಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸಿದೆ. ಅವರಲ್ಲಿ ಅನಕ್ಷರಸ್ತರ ಸಂಖ್ಯೆ ಹೆಚ್ಚಾಗಿದೆ. ನಗರಗಳಲ್ಲಿರುವ ಕೆಲವು ಕೊರಗರು ಇದರ ಲಾಭವನ್ನು ಪಡೆದುಕೊಂಡಿದ್ದಾರೆ. ಗ್ರಾಮಾಂತರ ಪ್ರದೇಶದಲ್ಲಿರುವ ಕೊರಗರು ಅತ್ಯಂತ ಹಿಂದುಳಿದಿದ್ದು, ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಳ್ಳುತ್ತಿಲ್ಲ. ಬಡತನ, ಮನೆಯ ವಾತಾವರಣ, ಬೇರೆ ಸಮುದಾಯದೊಂದಿಗೆ ಬೆರೆಯದಿರುವುದು, ಶೈಕ್ಷಣಿಕ ಮಹತ್ವ ಗೊತ್ತಿಲ್ಲದಿರುವದು, ಮುಂತಾದ ಕಾರಣಗಳಿಂದ ಅವರು ಶೈಕ್ಷಣಿಕವಾಗಿ ಹಿಂದುಳಿದ್ದಿದ್ದಾರೆ. ಇವರ ಸ್ಥಿತಿ ಗತಿಯನ್ನು ಮನಗಂಡ ಸರ್ಕಾರ ಇವರ ಏಳಿಗೆಗಾಗಿ ವಿಶೇಷ ಯೋಜನೆಗಳನ್ನು ರೂಪಿಸಿದೆ. ಆದರೆ, ಈ ಯೋಜನೆಗಳ ಲಾಭ ಅವರು ಎಷ್ಟು ಪಡೆದುಕೊಂಡಿದ್ದಾರೆ. ಎಂಬುದು ಮುಖ್ಯವಾದ ಅಂಶವಾಗಿದೆ. ಇದನ್ನು ಪರಿಶೀಲಿಸಲು ಸರಕಾರ ಅನೇಕ ಮಾಹಿತಿಗಳನ್ನು ಸಂಗ್ರಹಿಸುತ್ತಿದೆ ಉದಾ: ಶಾಲೆಗೆ ಹೋಗುವ ಮಕ್ಕಳ ಸಂಖ್ಯೆ, ಮಧ್ಯದಲ್ಲಿ ಶಾಲೆ ಬಿಡಲು ಕಾರಣವೇನು? ಎಂಬುದನ್ನು ಅರಿತು. ಶಿಕ್ಷಣದ ಅರಿವನ್ನು ಜಾಗೃತಗೊಳಿಸಲು ಪ್ರಯತ್ನಿಸಲಾಗುತ್ತದೆ.

ಈ ಸಮುದಾಯದಲ್ಲಿ ಶಿಕ್ಷಣ ಯಾಕೆ ಹಿಂದುಳಿದಿದೆ ಎಂದು ಕೆದಕಿದಾಗ ಹಲವಾರು ಅಂಶಗಳನ್ನು ಗುರುತಿಸಲು ಸಾಧ್ಯ. ಇತರ ಸಮುದಾಯದಲ್ಲಿ ಕೂಡ ಶೈಕ್ಷಣಿಕ ಹಿನ್ನಡೆಗೆ ಕಾರಣವಾದ ಅಂಶಗಳಿವೆ. ಆದರೂ ಕೊರಗ ಸಮುದಾಯದಲ್ಲಿ ಅದಕ್ಕೆ ಹೆಚ್ಚು ಒತ್ತು ಕೊಡಬೇಕಾದ ಅಗತ್ಯವಿದೆ, ಕಾರಣ ಇತರ ಸಮುದಾಯದಲ್ಲಿ ಮಗುವಿಗೆ ಸ್ವಲ್ಪವೇ ಅವಕಾಶ ಅವನಲ್ಲಿ ಅಗಾಧವಾದ ಶೈಕ್ಷಣಿಕ ಬದಲಾವಣೆಯನ್ನು ತರಬಹುದಾಗಿದೆ ಆದರೆ, ಕೊರಗ ಸಮುದಾಯದಲ್ಲಿ ಅಗಾಧವಾದ ಅವಕಾಶಗಳು ಸಿಕ್ಕಿದರೆ ಸ್ವಲ್ಪ ಬದಲಾವಣೆ ಸಾಧ್ಯ. ಎಂದರೆ, ಸಮುದಾಯದ ಹಿನ್ನಲೆ, ಮನೋಭಾವ ಶಿಕ್ಷಣದ ಸಂದರ್ಭದಲ್ಲಿ ಎಷ್ಟು ಗಾಢವಾಗಿದೆ ಎಂದು ತಿಳಿಯಬಹುದು.

**ಸಮುದಾಯದಲ್ಲಿರುವ 'ಶಿಕ್ಷಣದ' ಲಕ್ಷಣಗಳು ಈ ಕೆಳಗಿನಂತಿವೆ:**

1. ಸಮುದಾಯದಲ್ಲಿ ಕಲಿಕಾ ಪೂರಕವಾದ ವಾತಾವರಣವಿಲ್ಲ.
2. ಕಲಿಕಾ ದೃಷ್ಠಿಕೋನ ಸಮುದಾಯದಲ್ಲಿ ಕ್ಷೀಣಿತ ಪ್ರಮಾಣದಲ್ಲಿದೆ.
3. ಮಗುವಿಗೆ ಅಗತ್ಯವಾದ ಶೈಕ್ಷಣಿಕ ಬೆಂಬಲ (ಮಾನಸಿಕ, ಹಣಕಾಸಿನ) ರಕ್ಷಕರಿಂದ ಸಿಗುತ್ತಿಲ್ಲ.
4. ಇತರ ಸಮುದಾಯದಂತೆ, ಕೊರಗ ಸಮುದಾಯದಲ್ಲಿ ಶಿಕ್ಷಣಕ್ಕೆ ಮಾದರಿಗಳು (ಅಂದರೆ ಕಲಿತವರು, ಕಲಿತು ಉನ್ನತ ಹುದ್ದೆಗೇರಿದವರು) ಅತೀ ಕಡಿಮೆ ಪ್ರಮಾಣದಲ್ಲಿದೆ.
5. ರಕ್ಷಕರ ಅನಕ್ಷರತೆಯಿಂದ ಶಿಕ್ಷಣ ಹವ್ಯಾಸ ಕೊರಗ ಸಮುದಾಯದಲ್ಲಿ ತಲೆಮಾರುಗಳೊಂದಿಗೆ ವರ್ಗಾವಣೆಯಾಗುವುದಿಲ್ಲ.
6. 'ಕೊರಗ ಶಿಕ್ಷಣ'ದ ಬಗ್ಗೆ ಸಮಾಜಕ್ಕೆ ಇನ್ನೂ ಪೂರ್ವಾಗ್ರಹ ಉಳಿದು ಕೊಂಡಿರುವುದು.
7. ಸಮುದಾಯದೊಳಗಿರುವ ಪದ್ಧತಿ, ನಂಬಿಕೆ, ಆಚರಣೆಗಳು ಶಿಕ್ಷಣದ ಮೇಲೆ ಋಣಾತ್ಮಕ ಪರಿಣಾಮ ಬೀರುವುದು.
8. ಹಿನ್ನಲೆ, ಆಹಾರ, ಆರೋಗ್ಯ ಸಂಬಂಧಿ ಸಮಸ್ಯೆಗಳಿಂದ ಕಲಿಕಾ ಸಾಮರ್ಥ್ಯ ಕೊರಗ ಸಮುದಾಯದಲ್ಲಿ ಕಡಿಮೆಯಿರುವುದು.
9. ಸಮುದಾಯದಲ್ಲಿ ರಕ್ಷಕರ ದೃಷ್ಟಿಕೋನ ಮತ್ತು ಮಗುವಿನ ಶೈಕ್ಷಣಿಕ ದೃಷಿಕೋನ ವಿರುದ್ಧವಾಗಿರುವುದು.
10. ಆರೋಗ್ಯಕರ ಹವ್ಯಾಸಗಳು ಇಲ್ಲದಿರುವಿಕೆ, ಜೀವನದಲ್ಲಿ ಕ್ರಮ ಬದ್ಧತೆ ಇಲ್ಲದಿರುವಿಕೆ ಶಿಕ್ಷಣ ಆಶಯಗಳಿಗೆ ತೊಡಕಾಗಿರುವುದು.
11. ಸಾಂಸ್ಕೃತಿಕ ಹಿನ್ನಲೆಗಳೊಂದಿಗೆ ಬೆಸೆದುಕೊಂಡಿರುವ ಜೀವನ ಕ್ರಮ ಶಿಕ್ಷಣದ ಉದ್ದೇಶಗಳಿಗೆ ವಿರುದ್ಧ ದಿಶೆಯಿಂದ ವರ್ತಿಸುವುದು.
12. ಆಲಸ್ಯ, ಜಡತೆ ಇತ್ಯಾದಿಗಳಿಂದ ಸಮುದಾಯದ ಮಾನವ ಸಂಪನ್ಮೂಲದ ಅಪವ್ಯಯ.
13. ಪ್ರಸ್ತುತ ಭೋಧನಾ ವಿಧಾನ, ಪಠ್ಯಕ್ರಮ ಒಟ್ಟು ಶಿಕ್ಷಣ ಬುಡಕಟ್ಟು ಜನಾಂಗದ ಹಿನ್ನಲೆಗೆ ಪೂರಕವಲ್ಲದಿರುವುದು.

**ಶಿಕ್ಷಣಕ್ಕೆ ತೊಡಕಾಗುವ ಕೊರಗ ಸಮುದಾಯದ ನಂಬಿಕೆ ಆಚರಣೆಗಳು:**

ಐತಿಹಾಸಿಕ, ಸಾಂಸ್ಕೃತಿಕ, ಸಾಮಾಜಿಕ ಹಿನ್ನಲೆಗಳೊಂದಿಗೆ ಪ್ರಸ್ತುತ ಕೊರಗ ಜನಾಂಗದ ಬವಣೆ ಭರಿತ ಬದುಕನ್ನು ತಾಳೆ ಹಾಕಿದಾಗ ನಮಗೆ ಅವರಲ್ಲಿ ಇಂದೂ ಜೀವಂತವಾಗಿರುವ 'ಭಯ, ಕೀಳರಿಮೆ'ಯ ಕಾರಣಗಳು ಎಳೆ ಎಳೆಯಾಗಿ ಗೋಚರಿಸುವುದು. ಇನ್ನೂ ಕೂಡ ಸಮಾಜದ ಮೇಲ್ಜಾತಿ ಎಂದು ಕರೆಯಲ್ಪಡುವವರಿಂದ ಪ್ರತ್ಯಕ್ಷ ಪರೋಕ್ಷ ಶೋಷಣೆಯೊಂದಿಗೆ ಬದುಕುವ ಇವರ ಬಗ್ಗೆ ಸಮಾಜದಲ್ಲಿ ಯಾವ ನಂಬಿಕೆ ಇದೆ ಎಂಬುವುದನ್ನು ತಿಳಿದುಕೊಂಡರೆ, ಸಾಕ್ಷರತೆ, ವೈಚಾರಿಕತೆಯಲ್ಲಿ ಇತರ ಜನಾಂಗಗಳು ಮುಂದುವರಿದಿದ್ದರೂ ಇನ್ನೂ ಕೂಡಾ ಅವರು ಕೊರಗರ ಬಗ್ಗೆ ಅವೈಜ್ಞಾನಿಕ ಕಲ್ಪನೆಯತ್ತ ಇನ್ನೂ ಕನವರಿಸುವುದು, ಮಾನವೀಯತೆಗೆ ಕಳಂಕ ತರುವಂತೆ ಇವರನ್ನು ನಡೆಸಿಕೊಳ್ಳುವಾಗ ಯಾರು ಅಜ್ಞಾನಿಗಳು? ಎಂಬ ಗುಮಾನಿ ನಮಗೆ ಸಹಜವಾಗಿ ಬರುವುದು. ಅಂದರೆ ತಮ್ಮ ಹಿನ್ನೆಲೆಯಿಂದ ಸಮಾಜದಿಂದ ನಿಯಂತ್ರಿಸಲ್ಪಟ್ಟ, ಕೀಳರಿಮೆಯೊಂದಿಗೆ, ಮೂಢನಂಬಿಕೆಯೊಂದಿಗೆ ಬದುಕುವ ಇದರ ಜೀವನ ಮತ್ತು ಸಾಕ್ಷರರಾಗಿದ್ದು, ತಿಳುವಳಿಕೆಯವರಾಗಿದ್ದು ನಂಬಿಕೆಗೆ ಕಟ್ಟು ಬಿದ್ದು ಇವರನ್ನು ಅಮಾನವೀಯ ಆಚರಣೆಯತ್ತ ಸೆಳೆಯುವ ಇತರ ಜನಾಂಗದವರ ಮೂಢ ನಂಬಿಕೆಗೆ ಅಷ್ಟೇನು ವ್ಯತ್ಯಾಸವಿಲ್ಲ ಇದ್ದರೂ ಅದು ಅನಕ್ಷರಸ್ತರಾಗಿ ಮೂಢನಂಬಿಕೆಯನ್ನು ನೆಚ್ಚಿಸಿರುವ ಜನಾಂಗ ಮತ್ತು ಅಕ್ಷರವಂತರಾಗಿ ಮೂಢ ನಂಬಿಕೆಯನ್ನು ಬೆಳೆಸುವ ಜನಾಂಗ ಎಂಬಷ್ಟು ಮಾತ್ರ.

ಸಮಾಜದಲ್ಲಿ ಇವರನ್ನು ಈ ರೀತಿಯ ಆಚರಣೆಗಳತ್ತ ಆಕರ್ಷಿಸಲಿರುವ ನಂಬಿಕೆಗಳು ಈ ರೀತಿಯಲ್ಲಿವೆ;

1. ಕೊರಗರು ಕಾಡಿನೊಂದಿಗೆ ಬದುಕುತ್ತಿದ್ದು ಅವರಿಗೆ ಅತೀತವಾದ ಶಕ್ತಿ ಇದೆ.
2. ಈ ಶಕ್ತಿಯಿಂದ ಅವರಿಗೆ ಇಡೀ ಊರಿನ ಜನತೆಗೆ ಬಡಿದ ಶನಿಗ್ರಹಚಾರವನ್ನು ನಿವಾರಿಸುವ ಬಲವಿದೆ.
3. ಯಾವುದೇ ಖಾಯಿಲೆಯನ್ನು ಒಬ್ಬ ವ್ಯಕ್ತಿಯಿಂದ ಕೊರಗನೊಬ್ಬನಿಗೆ ವರ್ಗಾಯಿಸಲು ಸಾಧ್ಯವಿದೆ.

ಈ ಮೇಲಿನ ಕಾರಣಗಳಿಂದ ಸಮಾಜದಲ್ಲಿ ಯಾವುದೇ ವ್ಯಕ್ತಿಗೆ ಖಾಯಿಲೆಯಾದಲ್ಲಿ ಅಥವಾ ಮನೆಗೆ, ಕುಟುಂಬಕ್ಕೆ ಶನಿಗ್ರಹಚಾರ ವಕ್ಕರಿಸಿದಲ್ಲಿ ಅದನ್ನು ವರ್ಗಾಯಿಸಲು ಕೊರಗರಿಗೆ ಸಾಧ್ಯವೆಂದು ಸ್ವತ: ಕೊರಗರು; ಸಮಜವೂ ತಪ್ಪಾಗಿ ಒಪ್ಪಿಕೊಳ್ಳೂತ್ತದೆ. ಮಾನವ ಹಕ್ಕುಗಳಿಗೆ ವಿರುದ್ಧವಾಗಿ ಅಮಾನವೀಯ ನೆಲೆಯಲ್ಲಿ ಸಾಕ್ಷರರೆ ನಡೆಸುವ ಈ ರೀತಿಯ ಮೂಢನಂಬಿಕೆಗಳನ್ನು ಈ ಮೂಲಕ ವಿವರಿಸಲಾಗಿದೆ.

ಈ ರೀತಿಯ ನಂಬಿಕೆ, ಆಚರಣೆ, ಪದ್ಧತಿಗಳು ಸಮುದಾಯದ ಶೈಕ್ಷಣಿಕ ಪ್ರಗತಿಗೆ ಅಡ್ಡಿಯಾಗುತ್ತಿದೆ. ಇದರಲ್ಲಿ ಕೆಲವು ಪದ್ಧತಿಗಳನ್ನು ಸಮಾಜವು ಇವರ ಮೇಲೆ ಹೇರುತ್ತಲಿದೆ. ಅದಲ್ಲದೆ ಸಮುದಾಯದ ಒಳಗಿನ ಕೆಲವು ಆಚರಣೆಗಳೂ ಶಿಕ್ಷಣಕ್ಕೆ ತೊಡಕಾಗುತ್ತಿದೆ. ಆದ್ದರಿಂದಲೇ ಇವುಗಳನ್ನು (ಅ) ಸಮುದಾಯದ ಹೊರಗಿನ ಅಂಶಗಳು

ಮತ್ತು(ಆ) ಸಮುದಾಯದ ಒಳಗಿನ ಅಂಶಗಳು ಎಂದು ವರ್ಗೀಕರಿಸಲಾಗಿದೆ. ಇಲ್ಲಿ ಸಮುದಾಯದ ಹೊರಗಿನ ಅಂಶಗಳನ್ನು ಸಮಾಜವು ನಡೆಸಿಕೊಂಡು ಬರುತ್ತಿದೆ.

**ಕೊರಗ ಸಮುದಾಯದಲ್ಲಿ ಶೈಕ್ಷಣಿಕ ಅಧ್ಯಯನ:**

**ಅಧ್ಯಯನದ ಅಗತ್ಯವೇನು?**

ಈ ಮೇಲಿನ ವಿವರಣೆಯಿಂದ ಕೊರಗ ಸಮುದಾಯದಲ್ಲಿ ಶಿಕ್ಷಣ ಯಾವ ಹಂತದಲ್ಲಿದೆ, ಯಾವ ಪ್ರಗತಿಯನ್ನು ಬಯಸುತ್ತದೆ ಎಂದು ಊಹಿಸಬಹುದಾಗಿದೆ. ಆದರೆ ಇದನ್ನು ಅಂದಾಜಿಸಬೇಕಾದರೆ ಒಂದು ಹಂತದ ಅಧ್ಯಯನದ ಅಗತ್ಯವಿದೆ. ಈ ರೀತಿಯ ಅಧ್ಯಯನದಿಂದ ಮೇಲ್ನೋಟದ ಕಾರಣದ ಹೊರತಾದ ಕಾರಣಗಳೇನು ಎಂಬುದರ ಜೊತೆಗೆ ಶೈಕ್ಷಣಿಕ ಅಡೆತಡೆಗಳೇನು ಎಂದು ತಿಳಿದುಕೊಳ್ಳಬಹುದಾಗಿದೆ. ವಿಶ್ಲೇಷಣಾತ್ಮಕ ನಿಗಮಕ್ಕೂ ಈ ರೀತಿಯ ಅಧ್ಯಯನದಿಂದ ಸಾಧ್ಯವಾಗಬಹುದು ಮತ್ತು ಈ ನಿಗಮವನ್ನು ಸಮುದಾಯದಲ್ಲಿ ಅಳವಡಿಸಲು ಸಾಧ್ಯವೇ ಎಂಬ ಬಗ್ಗೆಯೂ ತಿಳಿದುಕೊಳ್ಳಬಹುದು.

**ಅಧ್ಯಯನದ ಉದ್ದೇಶಗಳು:**

1. ಯಾವುದೇ ಒಂದು ಪ್ರದೇಶದ ಒಟ್ಟು ಮಕ್ಕಳ ಶೈಕ್ಷಣಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಮತ್ತು ಅದು ಇತರ ಪ್ರದೇಶಗಳಲ್ಲಿ ಕೂಡ ಒಂದೇ ಆಗಿದೆಯೇ ಎಂದು ತಿಳಿದುಕೊಳ್ಳುವುದು.
2. ಕೊರಗ ಸಮುದಾಯದ ಕಲಿಕಾ ಸಾಮರ್ಥ್ಯವನ್ನು ಇತರ ಸಮುದಾಯದ ಕಲಿಕಾ ಸಾಮರ್ಥ್ಯದೊಂದಿಗೆ ಹೋಲಿಸುವುದು ಮತ್ತು ಕಾರಣಗಳನ್ನು ತಿಳಿಯುವುದು.
3. ಸಮುದಾಯದಲ್ಲಿರುವ ನಂಬಿಕೆ, ಆಚರಣೆಗಳು, ಸಂಪ್ರದಾಯ, ಕೌಟುಂಬಿಕ ನಿಯಮಗಳು ಶಿಕ್ಷಣಕ್ಕೆ ಹೇಗೆ ತೊಡಕಾಗಿವೆ ಎಂದು ಅರಿತು ಕೊಳ್ಳುವುದು.
4. ಪ್ರಸ್ತುತ ಶೈಕ್ಷಣಿಕ ಪದ್ಧತಿಗೆ ಪೂರಕವಾದ ವಾತಾವರಣವನ್ನು ಸಮುದಾಯದಲ್ಲಿ ಹೇಗೆ ಬೆಳೆಸಬಹುದೆಂದು ಕಂಡುಕೊಳ್ಳುವುದು.
5. ಸಾಂಸ್ಕೃತಿಕ ಕಲಾವಂತಿಕೆಗೆ ಶಿಕ್ಷಣದ ಮೂಲಕ ರಚನಾತ್ಮಕವಾದ ರೂಪು ಕೊಡಲು ಸಾಧ್ಯವಾಗಬಹುದೇ ಎಂದು ತಿಳಿದುಕೊಳ್ಳುವುದು.
6. ಸಮುದಾಯದ ಶೈಕ್ಷಣಿಕ ಮಟ್ಟವನ್ನು ತಿಳಿದುಕೊಳ್ಳುವುದು.
7. ಪ್ರಸ್ತುತ ಶೈಕ್ಷಣಿಕ ಸೌಲಭ್ಯಗಳು ಕೊರಗ ಸಮುದಾಯದ ಶೈಕ್ಷಣಿಕ ಮಟ್ಟವನ್ನು ಎಷ್ಟು ಹೆಚ್ಚಿಸಿದೆ ಎಂದು ನೋಡುವುದು.

8. ಪ್ರಸ್ತುತ ಸರ್ವ ಶಿಕ್ಷಾ ಅಭಿಯಾನದ ಉದ್ದೇಶಗಳು ಕೊರಗ ಶಿಕ್ಷಣದ ವಿಷಯದಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎಂದು ಕಂಡು ಕೊಳ್ಳುವುದು.
9. 'ಲಿಂಗ ಸಮಾನತೆ' ಆಶಯ ಶಿಕ್ಷಣದ ಮೂಲಕ ಕೊರಗ ಸಮುದಾಯದಲ್ಲಿ ಕೆಲಸ ಮಾಡಿದೆಯೇ? ಎಂದು ಅರಿತುಕೊಳ್ಳುವುದು.
10. 'ಕಡ್ಡಾಯ ಶಿಕ್ಷಣ ಮತ್ತು ಉಚಿತ ಶಿಕ್ಷಣ' ಹಕ್ಕನ್ನು ಕೊರಗ ರಕ್ಷಕರು ಹಕ್ಕು ಪ್ರತಿಪಾದನಾ ಮಾದರಿಯಲ್ಲಿ ಹೇಗೆ ನೋಡುತ್ತಾರೆ ಎಂದು ತಿಳಿಯುವುದು.
11. 'ಮಕ್ಕಳ ಹಕ್ಕುಗಳು' ಸಮುದಾಯದಲ್ಲಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಯಾವ ರೀತಿಯಲ್ಲಿ ಅನುಷ್ಠಾನವಾಗಿದೆ ಎಂದು ನೋಡುವುದು.
12. 'ಗುಣಾತ್ಮಕ ಶಿಕ್ಷಣ' ಕೊರಗ ಸಮುದಾಯದಲ್ಲಿ ಎಷ್ಟರ ಮಟ್ಟಿಗೆ ಸಾಧ್ಯವಾಗಬಹುದು ಎಂದು ತಿಳಿಯುವುದು
13. ಶಿಕ್ಷಣದ ಸುತ್ತ ಶಿಕ್ಷಕರು, ರಕ್ಷಕರು ಮತ್ತು ಮಕ್ಕಳ ಹಕ್ಕು ಮತ್ತು ಕತವ್ಯಗಳೇನು ಎಂದು ಅರಿತುಕೊಳ್ಳುವುದು.
14. 'ಪ್ರಸ್ತುತ ಕೊರಗ ಸಮುದಾಯದಲ್ಲಿ ಶಿಕ್ಷಣ' ಎಂಬುವುದು ಸರಕಾರದಿಂದ, ಸಮಾಜದಿಂದ, ರಕ್ಷಕರಿಂದ, ಶಿಕ್ಷಕರಿಂದ ಏನನ್ನು ಬಯಸುವುದು? ಎಂದು ತಿಳಿದುಕೊಳ್ಳುವುದು.
15. ಗುಣಾತ್ಮಕ ಶಿಕ್ಷಣವು ಕೊರಗ ಸಮುದಾಯದಲ್ಲಿ ದಕ್ಷ ರೀತಿಯಲ್ಲಿ ಅನುಷ್ಠಾನಕ್ಕೆ ಬರಲು ಯಾವ ವಿಷಯಗಳಿಗೆ ಪ್ರಾಧಾನ್ಯತೆ ಕೊಡಬೇಕಾಗುವುದು ಎಂದು ತಿಳಿದುಕೊಳ್ಳುವದು.
16. ಜನಾಂಗದಲ್ಲಿರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಿನ್ನಲೆಗಳು ಶಿಕ್ಷಣದ ಮೇಲೆ ಬೀರಿರುವ ಪ್ರಮಾಣವೆಷ್ಟು ಎಂದು ತಿಳಿಯುವದು.
17. 'ಸಮುದಾಯದತ್ತ ಶಾಲೆ' ಎಂಬ ಪರಿಕಲ್ಪನೆ ಕೊರಗ ಜನಾಂಗದ ಶಿಕ್ಷಣಕ್ಕೆ ಎಷ್ಟು ಹತ್ತಿರವಾಗಿದೆ ಎಂದು ತಿಳಿಯುವದು.
18. ಶಿಕ್ಷಣದ ಮೂಲ ತ್ರಿಕೋನ ಮೈತ್ರಿಗಳಾದ ಶಿಕ್ಷಕ –ರಕ್ಷಕ ಮಕ್ಕಳು ಇವರೊಳಗಿನ ಸಂಬಂಧ ಸಮುದಾಯದ ಒಟ್ಟು ಶೈಕ್ಷಣಿಕ ಅಭಿವೃದ್ಧಿಯಲ್ಲಿ ಬೀರಿದ ಪ್ರಭಾವವನ್ನು ತಿಳಿದುಕೊಳ್ಳುವದು.
19. ಪ್ರಸ್ತುತ 'ಕೊರಗ ಜನಾಂಗದಲ್ಲಿ ಶಿಕ್ಷಣ' ಎಂಬ ವಿಷಯಕ್ಕೆ ತೊಡಕಾಗಿರುವ ಅಂಶಗಳನ್ನು ಗುರುತಿಸುವದು.
20. ಸಂಬಂಧಿಸಿದ ಪರಿಹಾರ ಕ್ರಮ/ಸಲಹೆ ಸೂಚನೆಗಳನ್ನು ಸಮುದಾಯದಲ್ಲಿ ಅನ್ವಯಿಸಲು ಸಾಧ್ಯವಾಗದಂತಹ ಕಾರ್ಯ ತಂತ್ರಗಳನ್ನು ಕಂಡುಕೊಳ್ಳುವದು.

**ಮಕ್ಕಳ ಶೈಕ್ಷಣಿಕ ಪಾಂಡಿತ್ಯ:**

ಕ್ಷೇತ್ರ ಕಾರ್ಯದಲ್ಲಿ ಸಂಶೋಧಕನು ಕಚ್ಚಾ ಮಾಹಿತಿಗಳನ್ನು ಸಂಗ್ರಹಿಸಿ, ದತ್ತಾಂಶಗಳ ಸಂಖ್ಯಾಶಾಸ್ತ್ರೀಯ ವಿಶ್ಲೇಷಣೆಯನ್ನು ನೀಡುವುದು. ಕೋಷ್ಟಕ ತಯಾರಿಕೆಯ ಮೂಲಕ ಸಂಶೋಧಕ ತನ್ನ ಅಧ್ಯಯನದ ಫಲಿತಾಂಶದ ಸಾರಾಂಶವನ್ನು ಪ್ರಸ್ತುತ ಪಡಿಸುವುದು. ವಿವಿಧ ಗುಂಪುಗಳಿಗೆ ಸೇರ್ಪಡೆಯಾಗುವ ದತ್ತಾಂಶಗಳನ್ನು ಗುರುತಿಸಿ ಪಟ್ಟಿ ಮಾಡಲಾಗುತ್ತದೆ. ಕೋಷ್ಟಕ ತಯಾರಿಕೆಯು ವರ್ಗೀಕರಣ, ಪರಿಷ್ಕರಣೆ ಮತ್ತು ಸಂಕೇತಿಸುವಿಕೆಯನ್ನು ಅವಲಂಬಿಸಿರುತ್ತದೆ.

**ಕೋಷ್ಟಕ –3.1**

**ಪೋಷಕರ ಶೈಕ್ಷಣಿಕ ಮಾಹಿತಿ**

| ಕ್ರ. ಸಂ. | ಶಾಲೆ | 20-30 | | 31-40 | | 41-50 | | 50 ಮೇಲ್ಪಟ್ಟು | |
|---|---|---|---|---|---|---|---|---|---|
| | | ಒಟ್ಟು | ಶೇಕಡಾ | ಒಟ್ಟು | ಶೇಕಡಾ | ಒಟ್ಟು | ಶೇಕಡಾ | ಒಟ್ಟು | ಶೇಕಡಾ |
| 1. | ಕಿರಿಯ ಪ್ರಾಥಮಿಕ | 07 | 46.67 | 08 | 21.05 | 07 | 24.13 | 02 | 8.69 |
| 2. | ಹಿರಿಯ ಪ್ರಾಥಮಿಕ | 06 | 40.00 | 13 | 34.22 | 03 | 10.35 | 03 | 13.04 |
| 3. | ಪ್ರೌಢಶಾಲೆ | 02 | 13.33 | 01 | 2.63 | 04 | 13.79 | 01 | 4.35 |
| 4. | ಪದವಿ ಪೂರ್ವ | - | - | - | - | - | - | - | - |
| 5. | ಪದವಿ | - | - | 01 | 2.63 | - | - | - | - |
| 6. | ಅನಕ್ಷರಸ್ಥರು | - | - | 15 | 39.47 | 15 | 51.73 | 17 | 73.92 |
| | ಒಟ್ಟು | 15 | 100.00 | 38 | 100.00 | 29 | 100.00 | 23 | 100.00 |

ಪೋಷಕರಲ್ಲಿ ಶಿಕ್ಷಣದ ಗುಣಮಟ್ಟ ತುಂಬಾ ಕಡಿಮೆ ಇದೆ. ಕೋಷ್ಟಕ –3ರಲ್ಲಿ ಇದರ ಬಗ್ಗೆ ಮಾಹಿತಿ ನೀಡಲಾಗಿದೆ. 50ಕ್ಕಿಂತ ಹೆಚ್ಚು ವಯಸ್ಸಿನ ಪೋಷಕರಲ್ಲಿ 17%ರಷ್ಟು ಅನಕ್ಷರಸ್ಥರಿದ್ದಾರೆ. 20-30 ವಯೋಮಾನದ ಪೋಷಕರಲ್ಲಿ ಯಾರು ಸಹ ಅನಕ್ಷರಸ್ಥರಿಲ್ಲ. ಇವರೆಲ್ಲ ಶಿಕ್ಷಣದ ಅರಿವು ಕಡಿಮೆ ಇರುವುದರಿಂದ ಮತ್ತು ಚಿಕ್ಕ ವಯಸ್ಸಿನಲ್ಲಿ ಮದುವೆಯಾಗುವುದರಿಂದ ಹೆಚ್ಚು ಶಿಕ್ಷಣ ಪಡೆಯುವುದಿಲ್ಲ. ಆದ್ದರಿಂದ ಅವರು ಕಾಲೇಜು ಮೆಟ್ಟಲು ಹತ್ತುವುದು ತುಂಬಾ ವಿರಳ. 31-40ವಯೋಮಾನದ ಪೋಷಕರಲ್ಲಿ ಕೇವಲ 2.63%ರಷ್ಟು ಜನರು ಪದವಿಯನ್ನು ಪಡೆದುಕೊಂಡಿದ್ದಾರೆ.

## ಕೋಷ್ಟಕ 3.2

### ಶಾಲೆಗೆ ಹೋಗುತ್ತಿರುವ ಮಕ್ಕಳ ಮಾಹಿತಿ

| ಕ್ರ.ಸಂಖ್ಯೆ | ಶಾಲೆ | ಒಟ್ಟು | ಶೇಕಡಾ |
|---|---|---|---|
| 1 | ಕಿರಿಯ ಪ್ರಾಥಮಿಕ | 41 | 25.95 |
| 2. | ಹಿರಿಯ ಪ್ರಾಥಮಿಕ | 40 | 25.33 |
| 3. | ಪ್ರೌಢಶಾಲೆ | 61 | 38.60 |
| 4. | ಪದವಿ ಪೂರ್ವ ಕಾಲೇಜು | 11 | 6.97 |
| 5. | ಪದವಿ ಶಿಕ್ಷಣ | 03 | 1.89 |
| 6. | ಸ್ನಾತಕೋತ್ತರ ಶಿಕ್ಷಣ | 01 | 0.63 |
| 7. | ಐ.ಟಿ.ಐ. | 01 | 0.63 |
| | ಒಟ್ಟು | 158 | 100.00 |

ಕೊರಗರಲ್ಲಿ ಹೆಚ್ಚಿನ ಮಕ್ಕಳು ಸರ್ಕಾರಿ ಶಾಲೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. 61% ಮಕ್ಕಳು ಪ್ರೌಢಶಾಲಾ ಹಂತದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಕೊರಗರಲ್ಲಿ ಕಾಲೇಜು ಮಟ್ಟದ ಶಿಕ್ಷಣ ಅಂದರೆ ಪದವಿಯಲ್ಲಿ 3%, ಸ್ನಾತಕೋತ್ತರ 1% ಮತ್ತು ಐ.ಟಿ.ಐ.ಯನ್ನು 1% ಕಲಿಯುತ್ತಿದ್ದಾರೆ ಶಿಕ್ಷಣದಲ್ಲಿ ಹಿಂದಿರುವುದರಿಂದ ಮತ್ತು ಪೋಷಕರ ಬೆಂಬಲ ಇಲ್ಲದಿರುವುದರಿಂದ ಕಾಲೇಜು ಶಿಕ್ಷಣ ಪಡೆದುಕೊಳ್ಳುವಲ್ಲಿ ಅಸಮರ್ಥರಾಗಿದ್ದಾರೆ.

**ಕೊಷ್ಟಕ –3.3**

**ಲಿಂಗವಾರು ಶಾಲೆಗೆ ಹೋಗುತ್ತಿರುವ ಮಕ್ಕಳ ವಿವರ**

| ಶಾಲೆ | ಬಾಲಕರು | | ಬಾಲಕಿಯರು | | ಒಟ್ಟು | |
|---|---|---|---|---|---|---|
| | ಒಟ್ಟು | ಶೇಕಡಾ | ಒಟ್ಟು | ಶೇಕಡಾ | ಒಟ್ಟು | ಶೇಕಡಾ |
| ಅಂಗನವಾಡಿ | 11 | 14.10 | 08 | 8.25 | 19 | 10.85 |
| ಕಿರಿಯ ಪ್ರಾಥಮಿಕ | 21 | 26.94 | 20 | 20.62 | 41 | 23.42 |
| ಹಿರಿಯ ಪ್ರಾಥಮಿಕ | 19 | 24.36 | 21 | 21.64 | 40 | 22.88 |
| ಪ್ರೌಢಶಾಲೆ | 23 | 29.48 | 38 | 39.19 | 61 | 34.85 |
| ಪದವಿಪೂರ್ವ | 03 | 3.48 | 08 | 8.24 | 11 | 6.28 |
| ಪದವಿ | 01 | 1.48 | 02 | 2.06 | 03 | 1.72 |
| ಒಟ್ಟು | 78 | 100.00 | 97 | 100.00 | 175 | 100.00 |

ಕೋಷ್ಟಕ 5ನ್ನು ಗಮನಿಸಿದಾಗ ಬಾಲಕರಿಗಿಂತ ಬಾಲಕಿಯರು ಹೆಚ್ಚು ಅಂದರೆ ಬಾಲಕರು 78% ಶಾಲೆಗೆ ಹೋಗುತ್ತಿದ್ದು, ಬಾಲಕಿಯರು 97% ಶಾಲೆಗೆ ಹೋಗುತ್ತಿದ್ದಾರೆ. ಇದಕ್ಕೆ ಇನ್ನೊಂದು ಮುಖ್ಯ ಕಾರಣವೆಂದರೆ ಕೊರಗರಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಿರುವುದು ಮತ್ತು ಬಾಲಕರಿಗಿಂತ ಬಾಲಕಿಯರಿಗೆ ಶಿಕ್ಷಣದಲ್ಲಿ ಆಸಕ್ತಿ ಇರುವುದು. ಬಾಲಕರಲ್ಲಿ 23% ಮಕ್ಕಳು ಪ್ರೌಢ ಶಾಲಾ ಹಂತದ ಶಿಕ್ಷಣ ಪಡೆಯುತ್ತಿದ್ದು 1% ಪದವಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಬಾಲಕಿಯರಲ್ಲಿ 38% ಪ್ರೌಢಶಾಲಾ ಹಂತದಲ್ಲಿ ಮತ್ತು 2% ಪದವಿ ಹಂತದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ.

## ಕೊಷ್ಟಕ –3.4

## ಮಧ್ಯದಲ್ಲಿ ಶಾಲೆ ಬಿಟ್ಟವರ ಹಂಚಿಕೆ

| ೃ. ಂ. | ಶಾಲೆ | 10-20 | | 21-30 | | 31-40 | | 41-50 | | 50ಕ್ಕಿಂತ ಹೆಚ್ಚು | |
|---|---|---|---|---|---|---|---|---|---|---|---|
| | | ಒಟ್ಟು | % | ಒಟ್ಟು | % | ಒಟ್ಟು | % | ಒಟ್ಟು | % | ಒಟ್ಟು | % |
| . | ಕಿರಿಯ ಪ್ರಾಥಮಿಕ | 02 | 5.00 | 22 | 23.66 | 05 | 20.83 | 06 | 60 | 01 | 33.34 |
| . | ಹಿರಿಯ ಪ್ರಾಥಮಿಕ | 18 | 45.00 | 45 | 48.39 | 15 | 62.50 | 02 | 20 | 01 | 33.33 |
| . | ಪ್ರೌಢಶಾಲೆ | 20 | 50.00 | 21 | 22.58 | 04 | 16.67 | 02 | 20 | 01 | 33.33 |
| . | ಪದವಿ ಪೂರ್ವ | - | - | 05 | 5.37 | - | - | - | | - | - |
| | ಒಟ್ಟು | 40 | 100.00 | 93 | 100.00 | 24 | 100.00 | 10 | 100 | 03 | 100.00 |

ಕೊರಗರಲ್ಲಿ ಮಧ್ಯದಲ್ಲಿ ಶಾಲೆ ಬಿಟ್ಟಿರುವವರ ಸಂಖ್ಯೆ ಅಧಿಕವಾಗಿದೆ 20 ವರ್ಷದ ಒಳಗಿನವುಗಳಲ್ಲಿ 45% ರಷ್ಟು ಹಿರಿಯ ಪ್ರಾಥಮಿಕ ಹಂತದಲ್ಲಿ ಶಾಲೆ ಬಿಟ್ಟಿದ್ದಾರೆ. ಮತ್ತೆ 5% ರಷ್ಟು ಪದವಿ ಪೂರ್ವ ಶಿಕ್ಷಣದ ನಂತರ ಶಾಲೆಗೆ ಹೋಗಲಿಲ್ಲ. 40 ವರ್ಷದ ಕೊರಗರಲ್ಲಿ 62.50% ರಷ್ಟು ಮಧ್ಯದಲ್ಲಿ ಶಾಲೆ ಬಿಟ್ಟಿದ್ದು ಇವರು ಕಾಲೇಜು ಶಿಕ್ಷಣವನ್ನು ಪಡೆಯಲಿಲ್ಲ. 50 ವರ್ಷ ಒಳಗಿನವರಲ್ಲಿ 60% ಕಿರಿಯ ಪ್ರಾಥಮಿಕ ಮತ್ತು 20% ಹಿರಿಯ ಪ್ರಾಥಮಿಕ ಮತ್ತು 20% ಪ್ರೌಢಶಾಲಾ ಹಂತದಲ್ಲಿ ಶಾಲೆ ಬಿಟ್ಟಿದ್ದಾರೆ. 30 ವರ್ಷದ ಕೊರಗರಲ್ಲಿ ೧೫%ರಷ್ಟು ಹಿರಿಯ ಪ್ರಾಥಮಿಕ ಹಂತದಲ್ಲಿ 4% ಪ್ರೌಢಶಾಲಾ ಹಂತದಲ್ಲಿ ಶಾಲೆಯನ್ನು ಬಿಟ್ಟಿದ್ದಾರೆ. 50 ಮೇಲ್ಪಟ್ಟವರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿದೆ. ಇವರು ಶಾಲೆಗೆ ಹೋಗಲಿಲ್ಲ. ಕೇವಲ 1% ರಷ್ಟು ಶಾಲೆಗೆ ಹೋಗಿದ್ದರೂ ಮಧ್ಯದಲ್ಲಿ ಬಿಟ್ಟಿದ್ದಾರೆ.

ಮಧ್ಯದಲ್ಲಿ ಶಾಲೆ ಬಿಡಲು ಅನೇಕ ಕಾರಣಗಳಿರಬಹುದು ಮನೆಯಲ್ಲಿ ಬಡತನ, ಪೋಷಕರ ಪ್ರೋತ್ಸಾಹ ಇಲ್ಲದಿರುವುದು, ಮದುವೆ, ಶಿಕ್ಷಕರ ಶಿಕ್ಷೆ, ಹಾಸ್ಟೆಲ್ ಸಮಸ್ಯೆ, ತಂಗಿ/ತಮ್ಮನನ್ನು ಪೋಷಿಸುವುದು, ಪೋಷಕರ ಅಕಾಲಿಕ ಮರಣ, ಅನಾರೋಗ್ಯ ಇತ್ಯಾದಿ.

**ಕೋಷ್ಟಕ –3.5**

**ಅನಕ್ಷರಸ್ಥರ ವಿವರ**

| 10-20 | | 21-30 | | 31-40 | | 41-50 | | 50 ಮೇಲ್ಪಟ್ಟು | | ಒಟ್ಟು | |
|---|---|---|---|---|---|---|---|---|---|---|---|
| ಒಟ್ಟು | % | ಒಟ್ಟು | % | ಒಟ್ಟು | % | ಒಟ್ಟು | % | ಒಟ್ಟು | % | ಒಟ್ಟು | % |
| 02 | 4.26 | 06 | 12.77 | 17 | 36.17 | 16 | 34.04 | 06 | 12.76 | 47 | 100.00 |

ಶಾಲೆಗೆ ಹೋಗದೆ ಇರುವವರಲ್ಲಿ 30 ವರ್ಷ ಮೇಲ್ಪಟ್ಟವರ ಸಂಖ್ಯೆ 17% ಅಧಿಕವಾಗಿದೆ. 20 ವರ್ಷದ ಒಳಗಿನವರಲ್ಲಿ ಅನಕ್ಷರಸ್ಥರ ಸಂಖ್ಯೆ 2% ರಷ್ಟಿದೆ.

## ಸರ್ಕಾರದ ಶೈಕ್ಷಣಿಕ ಸೌಲಭ್ಯಗಳು

ಕೊರಗರು ಶಿಕ್ಷಣದಲ್ಲಿ ತುಂಬಾ ಹಿಂದುಳಿದಿದ್ದರಿಂದ ಅವರ ಬಗ್ಗೆ ವಿಶೇಷ ಗಮನವಿತ್ತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುತ್ತಿದೆ. 98% ಸರ್ಕಾರಿ ಶಾಲೆಗಳಲ್ಲಿ ಕಲಿಯುತ್ತಿದ್ದು 2% ಮಕ್ಕಳು ಇಂಗ್ಲೀಷ್ ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಕ್ಷೇತ್ರ ಕಾರ್ಯದಲ್ಲಿ ನಾವು ಪ್ರಶ್ನೆ ಕೇಳಿದಾಗ 100% ಇದರ ಲಾಭವನ್ನು ಪಡೆಯುತ್ತಿದ್ದಾರೆ. ವಿದ್ಯಾರ್ಥಿವೇತನ, ಫ್ರೀಶಿಪ್, ಪುಸ್ತಕ, ಸಮವಸ್ತ್ರ, ವಸತಿ ಶಾಲೆಗಳಿದ್ದರೆ ಹಾಸ್ಟೆಲ್ ಸೌಲಭ್ಯವನ್ನು ಮಕ್ಕಳು ಪಡೆಯುತ್ತಿದ್ದಾರೆ. ಈ ಯೋಜನೆಗೆ ಲಾಭದಿಂದ ಕೊರಗ ಮಕ್ಕಳಲ್ಲಿ ಸಾಕ್ಷರತೆಯನ್ನು ಸ್ವಲ್ಪ ಮಟ್ಟಿಗೆ ಕಾಣಬಹುದು.

ಕೇಂದ್ರ ಸರ್ಕಾರ 11ನೇ ಪಂಚವಾರ್ಷಿಕ ಯೋಜನೆಯಡಿ 2008-09ನೇ ಸಾಲಿನಲ್ಲಿ ಸಾಮುದಾಯದ ಅಭಿವೃದ್ಧಿಗೆ 50 ಲಕ್ಷವನ್ನು ದ.ಕ. ಜಿಲ್ಲೆಗೆ ಬಿಡುಗಡೆ ಮಾಡಿರುತ್ತದೆ. ಈ ಯೋಜನೆಯಲ್ಲಿ ಶಿಕ್ಷಣಕ್ಕಾಗಿ ಮಂಗಳೂರು ತಾಲೂಕಿಗೆ 21.65 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿದೆ.

## ಕೊಷ್ಟಕ –3.6

### ಶಿಕ್ಷಣ ಮುಂದುವರಿಸಲು ಕಾರಣಗಳು

| ಕಾರಣಗಳು | ಒಟ್ಟು | ಶೇಕಡಾ |
|---|---|---|
| ಜ್ಞಾನಾರ್ಜನೆ | 15 | 14.29 |
| ಸ್ವಾವಲಂಬನೆ | 07 | 6.67 |
| ಒಳ್ಳೆಯ ಭವಿಷ್ಯಕ್ಕಾಗಿ | 20 | 19.05 |
| ಓದಲು ಬರೆಯಲು ಕಲಿಯುತ್ತಾರೆ | 07 | 6.67 |
| ಉದ್ಯೋಗಕ್ಕಾಗಿ | 10 | 9.53 |
| ಸಮಸ್ಯೆಗಳ ಪರಿಹಾರಕ್ಕಾಗಿ | 04 | 3.80 |
| ಶಿಸ್ತು | 02 | 1.90 |
| ದೊಡ್ಡ ವ್ಯಕ್ತಿಯಾಗುವ ಆಸೆ | 03 | 2.86 |
| ನಮಗಿಂತ ಹೆಚ್ಚು ಕಲಿಯಲಿ | 02 | 1.90 |
| ಬೇರೆ ಮಕ್ಕಳೊಂದಿಗೆ ಬೆರೆಯುತ್ತಾರೆ | 05 | 4.76 |
| ಯಾವುದೇ ಅಭಿಪ್ರಾಯವಿಲ್ಲ | 30 | 28.57 |
| ಒಟ್ಟು | 105 | 100.00 |

ಶಿಕ್ಷಣ ಪ್ರತಿಯೊಬ್ಬನಿಗೂ ಮುಖ್ಯ ಆದರೆ ಕೊರಗರಲ್ಲಿ ಇನ್ನೂ ಶಿಕ್ಷಣದ ಕೊರತೆ ಎದ್ದು ಕಾಣುತ್ತದೆ. ಪೋಷಕರಿಗೆ ಮಕ್ಕಳ ಶಿಕ್ಷಣದ ಬಗ್ಗೆ ಕೇಳಿದಾಗ ಅನೇಕರು ಬೇರೆ ಬೇರೆ ರೀತಿಯಲ್ಲಿ ಉತ್ತರಿಸಿದ್ದಾರೆ. 30% ಪೋಷಕರು ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ. ಶೇ2 ರಷ್ಟು ಪೋಷಕರು ನಮ್ಮ ಮಕ್ಕಳು ನಮಗಿಂತ ಹೆಚ್ಚು ಶಿಕ್ಷಣ ಪಡೆಯಲಿ ಎಂದು ಮತ್ತು ಶಿಕ್ಷಣದಿಂದ ಶಿಸ್ತಿನಿಂದ ವರ್ತಿಸುತ್ತಾರೆ ಎಂದು ಅಭಿಪ್ರಾಯ ಪಟ್ಟರು.

### ಮಕ್ಕಳ ಶಿಕ್ಷಣದಿಂದ ಜೀವನದಲ್ಲಿ ಆದ ಬದಲಾವಣೆಗಳು:

50%ರಷ್ಟು ಪೋಷಕರು ನಮ್ಮ ಮಕ್ಕಳು ಶಾಲೆಗೆ ಹೋಗುವುದರಿಂದ ಶಿಸ್ತು ಮತ್ತು ಸ್ವಚ್ಛತೆಯನ್ನು ಕಲಿತಿದ್ದಾರೆ ಮತ್ತು ಬೇರೆ ಮಕ್ಕಳೊಡನೆ ಬೆರೆಯುವುದರಿಂದ ಬೇರೆ ಭಾಷೆಗಳನ್ನು ಕಲಿತಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರೆ 20%ರಷ್ಟು ಪೋಷಕರು ಯಾವುದೇ ಅಭಿಪ್ರಾಯವನ್ನು ವ್ಯಕ್ತ ಪಡಿಸಲಿಲ್ಲ.

**ಮಕ್ಕಳ ಉದ್ಯೋಗ:**

ಒಳ್ಳೆಯ ಶಿಕ್ಷಣ ಪಡೆದು ತಮ್ಮ ಮಕ್ಕಳು ಒಳ್ಳೆಯ ಉದ್ಯೋಗವನ್ನು ಮಾಡಲಿ ಎಂದು ಎಲ್ಲರೂ ಬಯಸುತ್ತಾರೆ. ಹಾಗೆ ಕೊರಗ ಪೋಷಕರಿಗೆ ಈ ಬಗ್ಗೆ ಕೇಳಿದಾಗ 70% ರಷ್ಟು ಪೋಷಕರು ಖಾಸಗಿ ಅಥವಾ ಸರ್ಕಾರಿ ಯಾವುದೇ ಉದ್ಯೋಗ ಮಾಡಿ ತಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಲಿ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರೆ 10% ರಷ್ಟು ಪೋಷಕರು ಖಾಸಗಿ ವೃತ್ತಿಗಳನ್ನು ಮಾಡಲಿ ಎಂದು ಅಭಿಪ್ರಾಯ ಪಟ್ಟರು.

**ಮೀಸಲಾತಿಯಿಂದ ಪಡೆದ ಸೌಲಭ್ಯಗಳು:**

ಕೊರಗರು ಪರಿಶಿಷ್ಟ ಪಂಗಡಕ್ಕೆ ಸೇರಿರುವುದರಿಂದ ಸರಕಾರ ಅನೇಕ ಮೀಸಲಾತಿ ಸೌಲಭ್ಯಗಳನ್ನು ನೀಡಿದೆ. ಇದರಲ್ಲಿ 80% ಮೀಸಲಾತಿಯಿಂದ ಶಿಕ್ಷಣಕ್ಕೆ ಅನುಕೂಲವಾಗಿದೆ ಎಂದು, 20% ಜನರು ಉದ್ಯೋಗ ಮತ್ತು ಶಿಕ್ಷಣ ಎರಡಕ್ಕೂ ಸರಕಾರದ ಸೌಲಭ್ಯಗಳು ಲಾಭದಾಯಕವಾಗಿವೆ ಎಂದು ತಿಳಿಸಿದರು.

ಮಕ್ಕಳ ಶಿಕ್ಷಣದಲ್ಲಿ ಪೋಷಕರು ಎಷ್ಟು ಆಸಕ್ತಿಯನ್ನು ವಹಿಸುತ್ತಾರೆ ಎಂದು ತಿಳಿದುಕೊಳ್ಳಲು ಸಂಶೋಧಕನು ನಿಮ್ಮ ಮಗುವಿನ ಶಾಲೆಯ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯಲ್ಲಿ (ಎಸ್.ಡಿ.ಎಮ್.ಸಿ.) ನೀವು ಸದಸ್ಯರಾಗಿದ್ದೀರಾ ಎಂದು ಕೇಳಿದಾಗ ೮೦% ಇಲ್ಲ ಎಂದು 20% ಹೌದು ಎಂದು ಉತ್ತರಿಸಿದರು.

ಶಾಲೆಯಲ್ಲಿ ನಡೆಯುವ ಸಭೆಗಳಲ್ಲಿ ಹೆಚ್ಚಿನ ಪಾಲಕರು ಭಾಗವಹಿಸುವುದಿಲ್ಲ. 70% ಪೋಷಕರು ನಾವು ಕೆಲಸಕ್ಕೆ ಹೋಗುತ್ತೇವೆ. ರಜೆ ಇರುವುದಿಲ್ಲ ಆದ್ದರಿಂದ ನಾವು ಸಭೆಗಳಿಗೆ ಹೋಗುವುದಿಲ್ಲ, 30% ರಷ್ಟು ಪೋಷಕರು ಸಭೆಗಳಿಗೆ ಹೋಗುತ್ತೇವೆ ಆದರೆ ಅಲ್ಲಿ ನಡೆಯುವ ಚರ್ಚೆ ನಮಗೆ ಅರ್ಥವಾಗುವುದಿಲ್ಲ ಎಂದು ಉತ್ತರಿಸಿದರು. ಇದರಿಂದ ಅವರು ಶಿಕ್ಷಣದಲ್ಲಿ ತುಂಬಾ ಹಿಂದೆ ಇದ್ದಾರೆ ಎಂಬ ಅಂಶ ಗೊತ್ತಾಗುತ್ತದೆ.

ಈ ಮೇಲಿನ ಅಧ್ಯಯನದಿಂದ ಕೊರಗರ ಶೈಕ್ಷಣಿಕ ಮಟ್ಟ ಅತ್ಯಂತ ಕಡಿಮೆಯಾಗಿದ್ದು ಇತರ ಸಮುದಾಯಗಳಿಗಿಂತ ಕಡಿಮೆ ಸಾಕ್ಷರತೆಯನ್ನು ಕಾಣಬಹುದು. ಆದರೆ ಇವತ್ತು ಕೊರಗರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಹೆಚ್ಚುತ್ತಿರುವುದನ್ನು ಗಮನಿಸಬಹುದು.

**ಕೊರಗರ ಶೈಕ್ಷಣಿಕ ಮಟ್ಟ ಸುಧಾರಿಸಲು ಕೆಲವು ಸೂಚನೆಗಳನ್ನು ಸೂಚಿಸಲಾಗಿದೆ**

1. ಕೊರಗರು ಯಾವ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಅಲ್ಲಿ ವಸತಿ ಶಾಲೆಗಳನ್ನು ಪ್ರಾರಂಭಿಸುವುದು.
2. ಕೊರಗರಿಗಾಗಿಯೇ ಆಶ್ರಮ ಶಾಲೆಗಳನ್ನು ಪ್ರಾರಂಭಿಸುವುದು.

3. ಒಳ್ಳೆಯ ಸೌಲಭ್ಯಗಳನ್ನು ಒದಗಿಸುವುದು.
4. ಶೈಕ್ಷಣಿಕವಾಗಿ ಹಿಂದಿರುವುದರಿಂದ ಶಾಲಾ ಅವಧಿಯ ನಂತರ ಅವರಿಗೆ ವಿಶೇಷ ತರಬೇತಿ ನೀಡುವುದು.

ಸರ್ಕಾರ ಅಲ್ಲದೆ ಸರ್ಕಾರೇತರ ಸಂಘ ಸಂಸ್ಥೆಗಳು ಕೊರಗರ ಶಿಕ್ಷಣಕ್ಕಾಗಿ ಒಟ್ಟಾಗಿ ದುಡಿಯಬೇಕಾಗಿದೆ. ಈಗಾಗಲೇ ಅನೇಕ ಖಾಸಗಿ ಸಂಸ್ಥೆಗಳು ಕೊರಗರ ಅಭಿವೃದ್ಧಿಗಾಗಿ ಕೆಲಸ ಮಾಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಮಂಗಳೂರು ತಾಲೂಕಿನಲ್ಲಿ ಅನೇಕ ಖಾಸಗಿ ಸಂಸ್ಥೆಗಳು ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿವೆ.

# ಅಧ್ಯಾಯ – 4

## ಸಾರಾಂಶ, ಉಪಸಂಹಾರ ಮತ್ತು ಸಲಹೆಗಳು

ಸಮುದಾಯಕ್ಕೆ ಗುಣಾತ್ಮಕವಾದ ಶಿಕ್ಷಣವನ್ನು ನೀಡುವ ನಿಟ್ಟಿನಲ್ಲಿ ಇರುವ ಮಾನವ ಸಂಪನ್ಮೂಲವನ್ನು ಸಮಯೋಚಿತವಾಗಿ ಕ್ರೋಢೀಕರಿಸಿ ರಕ್ಷಕ, ಶಿಕ್ಷಕ ಮತ್ತು ಮಕ್ಕಳ ಕಡೆಯಿಂದ ಸಮಗ್ರವಾದ ತೀವ್ರತರ ಬದಲಾವಣೆ ಬರಬೇಕಾಗಿದೆ. ನಿರಂತರ ಸಂವೇದನಾ ಕಾರ್ಯಕ್ರಮವು ಎಲ್ಲ ಭಾಗಗಳಿಂದಲೂ ಬರಬೇಕಾದ ಅಗತ್ಯವಿದೆ. ಕಾಲಾಂತರಗಳಿಂದ ವಿಭಿನ್ನ ನೆಲೆಗಟ್ಟಿನಿಂದ ಬಂದಂತಹ ಸಮುದಾಯದ ಅಭಿವೃದ್ಧಿಯು ಸಮಾಜದಲ್ಲಿ ಬರುವ ಎಲ್ಲ ಅಂಗಗಳ ಕರ್ತವ್ಯವಾಗಬೇಕಾಗುತ್ತದೆ.

ಸಾಮಾಜಿಕ ಪ್ರತ್ಯೇಕತೆಯಿಂದ ಹೊರಬರಲಾರದೆ, ಇನ್ನು ದೂರ ಉಳಿದಿರುವ ಕೊರಗ ಸಮುದಾಯದ ಎಲ್ಲ ಸಮಸ್ಯೆಗಳು ಪರಿಹಾರ ಕಾಣಬೇಕಾಗಿರುವುದು ಪ್ರಜಾಪ್ರಭುತ್ವ ಆಶಯದಂತೆ ಅಗತ್ಯವೂ ಆಗಿದೆ. ತಮ್ಮದೇ ರೀತಿ, ನೀತಿ, ಆಚಾರ ವಿಚಾರಗಳಿಂದ ವಿಭಿನ್ನ ಸಂಪ್ರದಾಯಗಳಿಂದ ಕೂಡಿದೆ. ಸಮುದಾಯದ ಶೈಕ್ಷಣಿಕ ಸಮಸ್ಯೆಗೆ ದೂರದೃಷ್ಟಿಯಿಂದ ಕೂಡಿದ ದೀರ್ಘಾವಧಿ ಯೋಜನೆಗಳು ಅಗತ್ಯವಾಗಿವೆ. ಇಲ್ಲಿ ಕಟ್ಟು ಪಾಡುಗಳೊಂದಿಗೆ ಬದುಕಿದ ಜನಾಂಗದ ಸೂಕ್ಷ್ಮತೆಗಳನ್ನು ಅರಿತುಕೊಳ್ಳಬೇಕಾಗಿದೆ. ನಿರಂತರ ಸಂವೇದನಾ ಕಾರ್ಯದಿಂದ ಶಿಕ್ಷಣದ ಮಹತ್ವ ಮತ್ತು ಅಗತ್ಯದ ಅರಿವು ತುಂಬಿಸಬೇಕಾಗಿದೆ. ಈ ಘರ್ಷಣೆಗಳೆಡೆಯಲ್ಲಿ ಅವರಿಗೆ ಇಂದು ನಾವೇನಾಗಿದ್ದೇವೆ? ನಾಳೆ ಏನಾಗಬೇಕಾಗಿದೆ? ಎಂಬ ಸ್ವ ಅರಿವು ಬರಬೇಕಾಗಿದೆ. ಇವು ನಾವು ತೃಪ್ತರು ಎಂಬುದರ ಬದಲಾಗಿ, ನಾವು ತೃಪ್ತರಲ್ಲ ನಮಗೆ ನಾಳೆಗಳಿಗೆ ಎಂಬುದಾಗಿ ಅವರು ತಿಳಿಯುವವರಾಗಬೇಕು. ಆದ್ದರಿಂದಲೇ ಸಂವೇದನಶೀಲತೆಯ ಆರಂಭವೇ ಕೊರಗರಲ್ಲಿ ಶಿಕ್ಷಣ ಎನ್ನಬಹುದು.

ಶಿಕ್ಷಣ–ಸಂಘಟನೆ–ಹೊರಾಟ ಎಂಬ ಅಂಬೇಡ್ಕರ್ ಆಶಯದಂತೆ ವ್ಯಕ್ತಿಯೊಬ್ಬ ಶಿಕ್ಷಣದ ಮೂಲಕ ಸಂಘಟಿಸಲ್ಪಟ್ಟ ಹೋರಾಟದ ಮೂಲಕ ಹಕ್ಕು ಕರ್ತವ್ಯಗಳನ್ನು ಅನುಭವಿಸಬಲ್ಲ. ಅಂದರೆ ಪ್ರಜಾಪ್ರಭುತ್ವ ದೇಶಗಳಲ್ಲಿ ಅರಿವಿನಿಂದ ಮಾತ್ರ ಅವನು ಪ್ರಜೆ ಮತ್ತು ಪ್ರಭುವಾಗಬಹುದು. ಈ ಅರಿವಿನ ಕಿಡಿ ಶಿಕ್ಷಣದಿಂದಲೇ ಹೊತ್ತಿಕೊಳ್ಳಲು ಸಾಧ್ಯ. ಸಮಾನತೆ, ಸ್ವಾತಂತ್ರ್ಯ, ಐಕ್ಯತೆ, ಜಾತ್ಯಾತೀತತೆ ಇತ್ಯಾದಿ ಅರ್ಥ ಗರ್ಭಿತ ಆಶಯಗಳೊಂದಿಗೆ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ನಮ್ಮ ದೇಶದಲ್ಲಿ ಪ್ರತಿಯೊಬ್ಬರಿಗೂ ಅವಕಾಶಗಳಿವೆ. ಈ ಆಧಾರದಲ್ಲಿ ಸಮಪಾಲಿದೆ, ಸಮಬಾಳಿದೆ. ಯಾವುದೇ ಒಂದು ಧರ್ಮದ, ಜಾತಿಯ, ವರ್ಗದ, ಜನಾಂಗಕ್ಕೆ ಈ ಅವಕಾಶವು ನಷ್ಟವಾಗುವುದಾದರೆ ಅಲ್ಲಿ ಪ್ರಜಾಪ್ರಭುತ್ವದ ಆಶಯವು ವಿಫಲವಾಗುತ್ತದೆ. ಕಾಲಾಂತರಗಳಿಂದ ಶೋಷಣೆಯೊದಿಗೆ ಬದುಕಿ, ಗಮನಿಸಲ್ಪಟ್ಟ, ಒಂದು ಜನಾಂಗವಾಗಿ ಕೊರಗ ಸಮುದಾಯವೊಂದು ಗುರುತಿಸಲ್ಪಡುವುದೆಂದರೆ–ಅದು ದೇಶದ ಆಶಯಗಳ ಆಕಾಶದಲ್ಲಿ ಕಪ್ಪು ಚುಕ್ಕೆಯಾಗುತ್ತದೆ. ಆದ್ದರಿಂದ ಇಲ್ಲಿ ಈ ತಪ್ಪುಗಳು ಮರುಕಳಿಸದಂತೆ ಸಮಾಜದ ಎಲ್ಲರೂ

ಗಮನಿಸಬೇಕಾಗಿದೆ. ಮುಖ್ಯವಾಗಿ ಸಮಾಜದ ಪರಿವರ್ತನೆಯನ್ನೇ ಮಾಡಲು ಸಾಮರ್ಥ್ಯವಿರುವ ಲೇಖಕರು, ಬುದ್ಧಿಜೀವಿಗಳು, ಕವಿಗಳು, ಪತ್ರಕರ್ತರು, ಮಾಧ್ಯಮಗಳು ಈ ಬಗ್ಗೆ ಸಮಾಜದ ಕಣ್ಣು ತೆರೆಸಬೇಕಾಗಿದೆ. ಸಾಮೂಹಿಕವಾಗಿರುವ ಮಾನಸಿಕ ಅಸ್ಪೃಶ್ಯತೆ ಕಡಿಮೆಯಾಗುವಲ್ಲಿ ಧಾರ್ಮಿಕ ಮುಖಂಡರಿಗೆ ಕರ್ತವ್ಯಗಳಿವೆ. ಆದರೆ ಅವರದನ್ನು ಎಷ್ಟು ಬಳಸಿದ್ದಾರೆ ಎಂಬುವುದು ಇಲ್ಲಿ ನಾವೆಲ್ಲರೂ ಚಿಂತಿಸಬೇಕಾದ ವಿಷಯ. ಈ ರೀತಿಯಲ್ಲಿ ನೋಡಿದಾಗ ಕಲಿತವರ ಮೂಢನಂಬಿಕೆಯ ಎದುರು ಅರಿವಿಲ್ಲದವರ ಮೂಢನಂಬಿಕೆ ನಾಚಿ ನಿರಾಶೆಗೊಳ್ಳಬಹುದು. ಅಂದರೆ ಅಕ್ಷರಸ್ಥ ಸಮಾಜ ಅಕ್ಷರವಿಲ್ಲದವರನ್ನು ನಡೆಸಿ, ತಿದ್ದಿ ಮುನ್ನಡೆಸಬೇಕಾಗಿದೆ. ಆದರೆ ಅವರೇ ಇಂತವರನ್ನು ಮತ್ತಷ್ಟು ಅಸ್ಪೃಶ್ಯರನ್ನಾಗಿ ಇಟ್ಟಾಗ ನಮಗೆ ನಾಗರೀಕತೆ ಎಂಬ ಪದದ ಅರ್ಥವನ್ನು ಪುನರ್ ವಿಮರ್ಶೆ ಮಾಡಬೇಕಾದ ಅನಿವಾರ್ಯತೆ ಕಾಣುತ್ತಿದೆ.

ಈ ಎಲ್ಲದರ ಮಧ್ಯೆ ಸರಕಾರ, ಸಮಾಜದ ಸಮಾನ ಮನಸ್ಕ ಗುಂಪುಗಳು ಭಾವನೆಗಳ ತುಡಿತಕ್ಕೊಳಗಾದವರು ಕರ್ತವ್ಯಪರ ಅಧಿಕಾರಿಗಳು ಕೊರಗ ಸಮುದಾಯದ ಅಭಿವೃದ್ಧಿಯತ್ತ ಮುಖಮಾಡಿರುವುದನ್ನು ನಾವಿಂದು ಶ್ಲಾಘಿಸಲೇಬೇಕಾಗಿದೆ. ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿರುವ ಸರಕಾರ ಈ ಕ್ಲಿಷ್ಟಯೋಜನೆಯಲ್ಲಿ ಯಶಸ್ವಿಯಾಗಬೇಕಾದರೆ ಸಮುದಾಯದ ಸಹಕಾರ ಪಾಲ್ಗೊಳ್ಳುವಿಕೆಯೂ ಅಷ್ಟೇ ಅಗತ್ಯವಾಗಿದೆ. ಆಧುನಿಕತೆಯ ಜಂಜಾಟದ ಜೀವನದೊಳಗೆ ಶಿಕ್ಷಣದ ಅರಿವಿನಿಂದ ಬೆಂಬೆತ್ತ ಬೇಕಾದ ಅನಿವಾರ್ಯತೆ ಸಮುದಾಯಕ್ಕಿದೆ. ತಮ್ಮೊಳಗಿನ ನಂಬಿಕೆ, ಆಚರಣೆಗಳ ಮೇಲೆ ಸೈದ್ಧಾಂತಿಕ ನೆಲೆಯಲ್ಲಿ ಯೋಚಿಸಬೇಕಾದ ಅಗತ್ಯ ಸಮುದಾಯಕ್ಕಿದೆ.

ಪ್ರಸ್ತುತ ಅಧ್ಯಯನದಲ್ಲಿ ಮೂರು ಊಹೆಗಳನ್ನು ರೂಪಿಸಲಾದೆ. ಒಂದನೇ ಊಹೆಯಂತೆ ಆಧುನೀಕರಣ ಪ್ರಭಾವದಿಂದಾಗಿ ಸಾಮಾಜಿಕ-ಆರ್ಥಿಕ, ಕ್ಷೇತ್ರದಲ್ಲಿ ಕೊರಗರಲ್ಲಿ ಪ್ರಗತಿಪರ ಬದಲಾವಣೆಗಳಾಗಿವೆ. ಹಿಂದಿನ ಕುಲಕಸುಬಾದ ಬುಟ್ಟಿ ಹೆಣೆಯುವುದು ಕೊರಗರಲ್ಲಿ ಕಡಿಮೆಯಾಗಿದೆ. ಅವರು ತಮ್ಮ ಜೀವನೋಪಾಯಕ್ಕೆ ಬೇರೆ ಉದ್ಯೋಗಗಳಲ್ಲಿ ನಿರತರಾಗಿದ್ದಾರೆ. ಅಲ್ಲದೇ ಸಾಮಾಜಿಕ ಸ್ಥಾನಮಾನದಲ್ಲಿ ಬದಲಾವಣೆಯಾದದ್ದು ಈ ಅಧ್ಯಯನದಲ್ಲಿ ದೃಢಪಟ್ಟಿದೆ.

ಎರಡನೇಯ ಊಹೆಯಂತೆ ಕೊರಗ ಸಮುದಾಯದ ಹೆಚ್ಚಿನ ಸದಸ್ಯರಲ್ಲಿ ಶಿಕ್ಷಣದ ಅರಿವು ಮೂಡಿ, ಶೈಕ್ಷಣಿಕ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಕೊರಗರು ಶಿಕ್ಷಣದ ಮಹತ್ವವನ್ನು ಅರಿತು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸುತ್ತಿರುವುದು ಈ ಅಧ್ಯಯನದಲ್ಲಿ ದೃಢಪಟ್ಟಿದೆ.

ಮೂರನೇಯ ಊಹೆಯಂತೆ ಶಿಕ್ಷಣದ ಅರಿವು ಮತ್ತು ಸೌಲಭ್ಯಗಳ ಬಳಕೆಯಿಂದಾಗಿ ಕೊರಗರಲ್ಲಿ ಶೈಕ್ಷಣಿಕ ಚಲನೆಯ ಪ್ರಮಾಣ ಹೆಚ್ಚುತ್ತಿದೆ. ಶಿಕ್ಷಣದ ಮಹತ್ವ ಮತ್ತು ಸರಕಾರದ ಸೌಲಭ್ಯಗಳಿಂದ ಕೊರಗರು ಹೆಚ್ಚು ಶಿಕ್ಷಿತರಾಗುತ್ತಿದ್ದಾರೆ ಎಂಬುದು ಈ ಅಧ್ಯಾಯದಲ್ಲಿ ದೃಢಪಟ್ಟಿದೆ.

**ಮುಖ್ಯ ಸಲಹೆಗಳು:-**

ಪ್ರಸ್ತುತ ಅಧ್ಯಯನದ ಆಧಾರದಲ್ಲಿ ಸರಕಾರದ ಇಲಾಖೆಗಳಿಗೆ ಈ ಕೆಳಗಿನ ಸಲಹೆ, ಶಿಫಾರಸ್ಸುಗಳನ್ನು ಮಾಡಲಾಗಿದೆ.

1. ವಿದ್ಯಾರ್ಥಿವೇತನವು ಮಕ್ಕಳಿಗೆ ಪೂರ್ಣವಾಗಿ ಉಪಯೋಗಿಸಲ್ಪಡುವ ಕಾರಣದಿಂದ ಅವುಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ವಸ್ತುರೂಪದಲ್ಲಿ ಕೊಡಬೇಕು. ಇರುವ ಸೌಲಭ್ಯವನ್ನು ಹೆಚ್ಚಿಸಿ ಅದು ಶಾಲಾ ವರ್ಷಾರಂಭದಲ್ಲೇ ಲಭಿಸುವಂತೆ ಮಾಡಬೇಕು. ಯಾವುದೇ ಕಾರಣಕ್ಕೆ ಈ ರೀತಿಯ ಸವಲತ್ತುಗಳನ್ನು ಅವರ ಮನೆಗೆ ಕೊಂಡುಹೋಗಿ ಕೊಡಬಾರದು.

2. ಆರ್ಥಿಕವಾಗಿ ಹಿಂದುಳಿದಿರುವುದರಿಂದ ಮತ್ತು ಸಾಮಾಜೀಕರಣಗೊಳ್ಳುವ ಅಗತ್ಯವಿರುವುದರಿಂದ ಎಲ್ಲ ಕೊರಗ ಮಕ್ಕಳಿಗೆ ಮತ್ತು ರಕ್ಷಕರಿಗೆ ಉಚಿತ ಪ್ರವಾಸ ಸೌಲಭ್ಯ ಶಾಲೆಯ ಮೂಲಕ ಕಲ್ಪಿಸಬೇಕು.

3. ರಕ್ಷಕರ ಸಭೆ ಅಥವಾ ಎಸ್.ಡಿ.ಎಂ.ಸಿ (ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ) ಸಭೆಯಲ್ಲಿ ಕೊರಗ ರಕ್ಷಕರ ಹಾಜರಾತಿಯನ್ನು ಕಡ್ಡಾಯಗೊಳಿಸಬೇಕು. ರಕ್ಷಕರ ನಿಶ್ಚಿತ ಕೊರಂನ್ನು ಅಗತ್ಯವಾಗಿಸಬೇಕು. ಈ ಬಗ್ಗೆ ಎಸ್.ಡಿ.ಎಂ.ಸಿ.ಯನ್ನು ಜವಾಬ್ದಾರನ್ನಾಗಿಸಬೇಕು. ಅಲ್ಲದೇ ಪ್ರತಿ ಎಸ್.ಡಿ.ಎಂ.ಸಿ.ಯಲ್ಲಿ ಕೊರಗ ಮಕ್ಕಳ ಪ್ರಗತಿ ಶಾಶ್ವತ ಅಜೆಂಡವಾಗುವಂತೆ ನಿರ್ದೇಶಿಸಬೇಕು.

4. ಪ್ರತೀ ತಿಂಗಳಿಗೆ ಒಮ್ಮೆಯಾದರೂ ಹಾಡಿ ಭೇಟಿಯನ್ನು ಇಟ್ಟುಕೊಳ್ಳಬೇಕು. ಇದರಿಂದ ಹಾಡಿಗಳಲ್ಲಿ ಶಿಕ್ಷಣದ ಬಗ್ಗೆ ಧನಾತ್ಮಕ ಚಿಂತನೆಗಳು ರೂಪುಗೊಳ್ಳಬಹುದು.

5. ವೇದಿಕೆ ಮತ್ತು ವೇದಿಕೇತರ ಸ್ಪರ್ಧೆಗಳಲ್ಲಿ ಸಮುದಾಯದ ಕೌಶಲ್ಯ ಕಲೆಗಳಾದ ಡೋಲು, ಕೊಳಲು, ಬುಟ್ಟಿ ಹೆಣೆಯುವುದು ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

6. ಕಾರ್ಯ ಸೂಚಿತ ಚಟುವಟಿಕೆಗಳು, ವಿಚಾರವಾದ (ಸೆಮಿನಾರ್) ಸಂವಾದ, ಆಶುಭಾಷಣ, ಭಾಷಣ ಇತ್ಯಾದಿ ಸಂದರ್ಭಗಳಲ್ಲಿ ಸಮಾಜದಲ್ಲಿರುವ ಕೆಟ್ಟ ನಂಬಿಕೆ, ಸಮಾಜಕ್ಕೆ ಕೊರಗರು ನೀಡಿದ ಕೊಡುಗೆಗಳು ಇತ್ಯಾದಿ ವಿಷಯಗಳನ್ನು ಸೇರಿಸಬೇಕು. ಇದರಿಂದ ಅವರ ಬಗ್ಗೆ ಧನಾತ್ಮಕ ಭಾವನೆ ಉಳಿದ ಮಕ್ಕಳಲ್ಲಿ ಬೆಳೆಯಲು ಸಾಧ್ಯವಿದೆ. ಕೊರಗ ಮಕ್ಕಳ ಸಂದರ್ಭದಲ್ಲಿ ಪಾರ್ಟ್ ಬಿ. ಗೆ ಹೆಚ್ಚು ಮಹತ್ವವನ್ನು ನೀಡಬೇಕು.

7. ಆಶ್ರಮ ಶಾಲೆಯ ಶಿಕ್ಷಕರಿಗೆ ಬುಡಕಟ್ಟು ಜನಾಂಗದ ಹಿನ್ನಲೆ ಮಾನವ ಸಂಪನ್ಮೂಲದ ಬಗ್ಗೆ ತರಬೇತಿಯನ್ನು ಕಡ್ಡಾಯವಾಗಿ ನೀಡಬೇಕು.

8. ಶಿಕ್ಷಕ ತರಬೇತಿ ಕೋರ್ಸ್‌ಗಳಲ್ಲಿ ಬುಡಕಟ್ಟು ಶಿಕ್ಷಣದ ಬಗ್ಗೆ ಪ್ರತ್ಯೇಕ ಪಾಠಗಳನ್ನು ಒಳಗೊಳ್ಳುವ ಹಾಗೆ ಮಾಡಬೇಕು. ಕೊರಗರ ಕೌಶಲ್ಯಕ್ಕೆ ಸಂಬಂಧಿಸಿದ ಯಾವುದೇ ವಿಷಯ ಪ್ರಾಥಮಿಕ ಯಾ ಪ್ರೌಢಶಾಲಾ ಪಠ್ಯ ಪುಸ್ತಕದಲ್ಲಿ ಒಳಗೊಳ್ಳಬೇಕು. ಈ ಬಗ್ಗೆ ಪುಸ್ತಕ ಪ್ರಾಧಿಕಾರ ಸಮಿತಿ ತೀರ್ಮಾನಗಳನ್ನು ಕೈಗೊಳ್ಳಬೇಕು.

9. ಪ್ರತಿ ಶಾಲೆಯಲ್ಲಿ ಕೊರಗ ಮಕ್ಕಳಿಗೆ ಆರೋಗ್ಯ ತಪಾಸಣಾ ಶಿಬಿರ ಹಮ್ಮಿಕೊಳ್ಳಬೇಕು. ಅದಕ್ಕೆ ಸಂಬಂಧಿಸಿದ ಔಷಧಿಗಳನ್ನು ಶಾಲೆಯಲ್ಲಿಯೇ ನೀಡಬೇಕು.

10. ಆಟೋಟ ಸ್ಪರ್ಧೆಗಳಲ್ಲಿ ಕ್ರಿಯಾಶೀಲರಾಗಿರುವ ಕಾರಣದಿಂದ ಕೊರಗ ಮಕ್ಕಳಿರುವ ಶಾಲೆಗಳಿಗೆ ಪ್ರತ್ಯೇಕ ಪರಿಕರಗಳನ್ನು ಶಾಲೆಗೆ ನೀಡಬೇಕು.

11. ಶೈಕ್ಷಣಿಕ ಯೋಜನೆಯು ಬಿ.ಆರ್.ಸಿ., ಎಸ್.ಎಸ್.ಎ.ಯಲ್ಲಿ ರಚಿಸುವಾಗ ಕೊರಗ ರಕ್ಷಕರು ಸಂಘಟನೆಯ ಪ್ರತಿನಿಧಿಗಳನ್ನು ಭಾಗೀದಾರರನ್ನಾಗಿ ಮಾಡಿಕೊಳ್ಳಬೇಕು.

12. ಪ್ರತಿ ಮೂರು ತಿಂಗಳಿಗೊಮ್ಮೆ ಕೊರಗ ಮಕ್ಕಳ ಶೈಕ್ಷಣಿಕ ಪ್ರಗತಿ ಪರಿಶೀಲನೆಯನ್ನು ಸಿ.ಆರ್.ಸಿ. (ಕ್ಲಸ್ಟರ್ ರಿಸೋರ್ಸ್ ಸೆಂಟರ್) ಬಿ.ಆರ್.ಸಿ. (ಬ್ಲಾಕ್ ರಿಸೋರ್ಸ್ ಸೆಂಟರ್) ಮಟ್ಟದಲ್ಲಿ ನಡೆಸಬೇಕು. ಇದರಲ್ಲಿ ಶಾಲಾ ಶಿಕ್ಷಕರು, ರಕ್ಷಕರು, ಎಸ್.ಡಿ.ಎಂ.ಸಿ. ಸ್ಥಳೀಯಾಡಳಿತ ಸಂಸ್ಥೆ ಮತ್ತು ಸರಕಾರಿ ಜವಾಬ್ದಾರಿ ಅಧಿಕಾರಿಗಳು ಸರಕಾರೇತರ ಸಂಸ್ಥೆ ಪಾಲ್ಗೊಳ್ಳಬೇಕು.

13. ಎಸ್.ಎಸ್.ಎ.ಯು ಸಮುದಾಯ ಮಾರ್ಗದರ್ಶಿಗಳನ್ನು ಮಧ್ಯವರ್ತಿ ಸಂಸ್ಥೆಗಳಿಂದ ವಿಮುಕ್ತವಾಗಿ ನೇರವಾಗಿ ಆಯ್ಕೆ ಮಾಡಬೇಕು. ಮತ್ತು ಇವರು ಶಾಲಾ ವರ್ಷಾರಂಭದ ಒಂದು ತಿಂಗಳ ಮೊದಲೇ ನೇಮಕಗೊಂಡು ಈ ಕೆಳಗಿನ ಕರ್ತವ್ಯಗಳನ್ನು ನಿಭಾಯಿಸಬೇಕು.

ಅ. ಇಡೀ ಸಮುದಾಯದ 16 ರಿಂದ ಕೆಳಗಿನ ಎಲ್ಲಾ ಮಕ್ಕಳ ಗಣತಿ

ಆ. ಸಮುದಾಯದ ಮಕ್ಕಳಿರುವ ಶೈಕ್ಷಣಿಕ ಸೌಲಭ್ಯಗಳ ಬಗ್ಗೆ ರಕ್ಷಕರಿಗೆ ಅರಿವನ್ನು ನೀಡುವುದು.

ಇ. ಅರ್ಧದಲ್ಲಿ ಶಾಲೆ ಬಿಟ್ಟ ಮಕ್ಕಳನ್ನು ಮರಳಿ ಶಾಲೆಗೆ ಸೇರಿಸುವುದು.

ಈ. ಎಸ್.ಡಿ.ಎಂ.ಸಿ.ಯಲ್ಲಿ ರಕ್ಷಕರು ಭಾಗವಹಿಸುವಂತೆ ತಿಳಿಸುವುದು.

ಉ. ಎಸ್.ಡಿ.ಎಂ.ಸಿ. ಸಭೆಗಳಲ್ಲಿ ಸ್ವತಃ ಭಾಗವಹಿಸುವುದು.

ಊ. ಶಾಲೆಯಲ್ಲಿನ ಮಾಸಿಕ ಯೋಜನೆಯನ್ನು ಮತ್ತು ಅದಕ್ಕೆ ಸಂಬಂಧಿಸಿದ ತಯಾರಿಯ ಬಗ್ಗೆ ರಕ್ಷಕರಿಗೆ ತಿಳಿಸುವುದು.

ಐ. ಶಿಕ್ಷಕ ರಕ್ಷಕರ ಮಧ್ಯೆ ಕೊಂಡಿಯಾಗಿದ್ದು ಸಮುದಾಯದಲ್ಲಿ ಶೈಕ್ಷಣಿಕ ಜವಾಬ್ದಾರಿಯ ಬಗ್ಗೆ ಮನವರಿಕೆ ಮಾಡುವುದು.

ಏ. ಕೊರಗ ಶಿಕ್ಷಣ ಸಮಸ್ಯೆಯನ್ನು ಇಲಾಖೆಯ ಗಮನಕ್ಕೆ ತರುವುದು. ಈ ಶಿಕ್ಷಣ ಮಾರ್ಗದರ್ಶಿಗಳನ್ನು ಪೂರ್ಣ ಪ್ರಮಾಣದಲ್ಲಿ ನೇಮಕ ಮಾಡುವುದಲ್ಲದೆ ಎಸ್.ಎಸ್.ಎ.ಯು ಇವರನ್ನು ನೇರವಾಗಿ ಮೋನಿಟರ್ ಮಾಡಬೇಕು. ಇದಲ್ಲದೆ ಎಸ್.ಎಸ್.ಎ.ಯು;

ಅ. ವಲಯ ಮಟ್ಟದ ಕೊರಗ ರಕ್ಷಕರ ವಿಶೇಷ ಸಭೆ ಕರೆಯಬೇಕು.

ಆ. ಎಸ್.ಡಿ.ಎಂ.ಸಿ.ಯ ಸದಸ್ಯರಾಗಿ ಕೊರಗರಿಗೆ ಮೀಸಲಾತಿಯನ್ನು ಕಡ್ಡಾಯಗೊಳಿಸಬೇಕು (ಈಗ ಎಸ್.ಟಿ. ಎಂದಿರುವುದರಿಂದ ಅದು ಇತರ ಸಮುದಾಯಕ್ಕೆ ಹೋಗುತ್ತದೆ) ಮತ್ತು

ಇ. ಎಸ್.ಡಿ.ಎಂ.ಸಿ. ಕೊರಗ ರಕ್ಷಕರಿಗೆ ತರಬೇತಿಯನ್ನು ನೀಡುವುದು.

14. ಆಶ್ರಮ ಶಾಲೆಗೆ ಎಲ್ಲಾ ರೀತಿಯ ಪೂರಕ ಸೌಲಭ್ಯಗಳನ್ನು ಕಲ್ಪಿಸುವುದು ಮತ್ತು ಈ ಶಾಲೆಗಳಿಗೆ ಸೇರುವ ಕೊರಗ ಮಕ್ಕಳಿಗೆ ವಿದ್ಯಾರ್ಥಿ ವೇತನವನ್ನು ಹೆಚ್ಚಿಸುವುದು.

15. ಯಾವುದೇ ಸೌಲಭ್ಯಗಳನ್ನು ಸರಕಾರ ಯಾ ಸ್ಥಳಿಯಾಡಳಿತ ಸಂಸ್ಥೆಗಳು ಕೊರಗರಿಗೆ ನೀಡುವಾಗ ಶಿಕ್ಷಣವು ಪ್ರಮುಖ ಮಾನದಂಡವಾಗಬೇಕು. ಈ ಆಧಾರದಲ್ಲಿ ಅವರಿಗೆ ರೇಶನಿಂಗ್, ಉಚಿತ ಔಷಧಿ, ಶಾಲೆಯ ಮೂಲಕವೇ ಸಿಗುವಂತೆ ಆಗಬೇಕು.

16. ಪ್ರತಿ ಹಾಡಿಗಳಲ್ಲಿ ಸಮುದಾಯಭವನ, ಅಂಗನವಾಡಿ, ಗ್ರಂಥಾಲಯ ಸೌಲಭ್ಯವನ್ನು ಮಂಜೂರು ಮಾಡಬೆಕು.

17. ಕೊರಗರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಆಧರಿಸಿ ಸರಕಾರವು ಅಧ್ಯಯನವನ್ನು ಕೈಗೊಳ್ಳಬೇಕು. ಇಲ್ಲಿ ಕೊರಗರ ಭಾಷಾ ಅಧ್ಯಯನವೂ ಅಗತ್ಯವಾಗಿದೆ.

18. ಕೊರಗರ ಡೊಲು, ನೃತ್ಯ, ಕೊಳಲು, ಕರಕುಶಲ ಕಲೆಗಳಿಗೆ ಮತ್ತು ಅವುಗಳ ಅಭಿವೃದ್ಧಿಗೆ ವಿಶೇಷ ಅನುದಾನವನ್ನು ಸರಕಾರ ನೀಡಬೇಕು. ಕೊರಗರ ಬಗ್ಗೆ ನಡೆಸುವ ಅಧ್ಯಯನದ ಆಧಾರದಲ್ಲಿ ಇದಕ್ಕೆ ರಚನಾತ್ಮಕ ರೂಪವನ್ನು ಕೊಡಬೇಕು.

19. ಕೊರಗ ಸಂಘಟನೆ ನಡೆಸಿಕೊಂಡು ಬರುತ್ತಿರುವ ಕೊರಗ ಮಕ್ಕಳ ಶಿಬಿರಕ್ಕೆ ಸರಕಾರವು ಅನುದಾನವನ್ನು ನೀಡಬೇಕು. ಅಂತಹ ಶಿಬಿರಗಳಲ್ಲಿ ಗುರುತಿಸಲ್ಪಟ್ಟ ಪ್ರತಿಭೆಗಳನ್ನು ತಾಲೂಕು

ಮತ್ತು ಜಿಲ್ಲಾ ಮಟ್ಟದಲ್ಲಿ ಕೊರಗರ ಸಾಂಸ್ಕೃತಿಕ ಕಲೋತ್ಸವವನ್ನು ಸಂಘಟಿಸಿ ಬೆಳಕಿಗೆ ಬರುವಂತೆ ಮಾಡಬೇಕು. ಇದಕ್ಕೆ ಪರಿಕರಗಳನ್ನು ನೀಡಬೇಕು.

20. ಅಜಲ್‌ನಂತಹ ಕಾರ್ಯಗಳಲ್ಲಿ 16 ವರ್ಷಕ್ಕಿಂತ ಕೆಳಗಿನ ಮಕ್ಕಳು ಪಾಲ್ಗೊಳ್ಳುವ ಬಗ್ಗೆ ಕಟ್ಟು ನಿಟ್ಟಾದ ಕ್ರಮ ಕೈಗೊಳ್ಳಬೇಕು. ಈ ಬಗ್ಗೆ ಎಸ್.ಡಿ.ಎಂ.ಸಿ. ಸ್ಥಳೀಯಾಡಳಿತದಂತಹ ಇಲಾಖೆಗಳಿಗೆ ಅಧಿಕಾರ, ಜವಾಬ್ದಾರಿಗಳನ್ನು ನೀಡಬೇಕು.

21. ಸ್ಥಳಿಯಾಡಳಿತ ಸಂಸ್ಥೆಗಳು ಸಮುದಾಯ ಪ್ರೇರಕರನ್ನು ಪ್ರತೀ ಪಂಚಾಯತಿನಲ್ಲಿ ನೇಮಿಸಬೆಕು. (ಪ್ರಸ್ತುತ ಕೇರಳ ಸರಕಾರ ಮಾಡುತ್ತಿರುವಂತೆ) ಸರಕಾರ ಸೌಲಭ್ಯಗಳು ಬಳಕೆ ಅರಿವಿನ ಬಗ್ಗೆ ಇವರು ಸಮುದಾಯಕ್ಕೆ ಮಾಹಿತಿ ನೀಡುವರು.

ಇವುಗಳಲ್ಲದೆ 'ಸಮಾಜದಲ್ಲಿ ಸಮುದಾಯ' ಎಂಬ ನೆಲೆಯಲ್ಲಿ ಇವರಿಗೆ ಸಂಬಂಧಿಸಿ ಪೂರಕ ಕಾರ್ಯಕ್ರಮಗಳನ್ನು ಸ್ಥಳಿಯಾಡಳಿತ, ಐ.ಟಿ.ಡಿ.ಪಿ. ಇತ್ಯಾದಿಗಳ ವತಿಯಿಂದ ಹಮ್ಮಿಕೊಳ್ಳಬಹುದು. ಚಟಗಳ ವಿರುದ್ಧ ಮಾಹಿತಿ, ಉಚಿತ ಆರೋಗ್ಯ ತಪಾಸಣಾ ಕಾರ್ಯಕ್ರಮ, ಗುಂಪಿನೊಂದಿಗೆ ಸಂವಾದ ಇತ್ಯಾದಿಗಳನ್ನು ಅದರಲ್ಲಿ ಸೇರಿಸಬಹುದು.

**ಸಮುದಾಯ ಮತ್ತು ಸಂಘಟನೆಗಳಿಗಾಗಿ ಇತರ ಕೆಲವು ಸಲಹೆಗಳು:**

ಈ ಸಲಹೆಗಳು ಸಮುದಾಯದಲ್ಲಿ ಅನುಷ್ಠಾನವಾಗಬೇಕಿದ್ದು, ಅವುಗಳನ್ನು ಸಂಘಟನೆಯ ಸರಿಯಾದ ರೀತಿಯಲ್ಲಿ ಯೋಜಿಸಬೇಕಾಗಿದೆ. ಸರಕಾರೇತರ ಸಂಸ್ಥೆಗಳು ಕೂಡ ಈ ಬಗ್ಗೆ ಮುತುವರ್ಜಿವಹಿಸಬೇಕು.

ಪ್ರತಿ ಹಾಡಿಗಳಲ್ಲಿ ಗುಂಪು ಸಭೆಗಳು ಮತ್ತು ಸ್ವಸಹಾಯ ಸಂಘಗಳ ಮೂಲಕ ಈ ಕೆಳಗಿನ ವಿಷಯಗಳಿಗೆ ಸಂಬಂಧಿಸಿ ನಿರಂತರ ಚರ್ಚೆಯನ್ನು ಮತ್ತು ಹಕ್ಕು ಪ್ರತಿಪಾದನೆಯ ರೀತಿಯಲ್ಲಿ ಎಲ್ಲ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಮುದಾಯಕ್ಕೆ ಈ ಸಲಹೆಗಳ ಮೂಲಕ ಸಾಧ್ಯವಾಗಬೇಕು. ರಕ್ಷಕರಿಗೆ, ಮಕ್ಕಳಿಗೆ ವಿಶೇಷ ರೀತಿಯ ಶಿಬಿರಗಳ ಮೂಲಕ ಇದು ಕಾರ್ಯಗೊಳ್ಳಬೇಕು.

1. ಪ್ರತೀ ಗುಂಪು ಸಭೆಗಳಲ್ಲಿ ಶಿಕ್ಷಣವು ಸಾಮಾನ್ಯ ವಿಷಯ (ಅಜೆಂಡ)ವಾಗಿರಬೇಕು.
2. ಮೌಲ್ಯ ಶಿಕ್ಷಣ ಮತ್ತು ಹದಿಹರೆಯದ ಶಿಕ್ಷಣದ ಮೂಲಕ ರಕ್ಷಕರಲ್ಲಿ ಅರಿವನ್ನು ಮೂಡಿಸಬೇಕು. ಇಲ್ಲಿ ಮೌಲ್ಯ ಶಿಕ್ಷಣವು ಚಟಗಳ ಬಗ್ಗೆಯೂ, ಹದಿಹರೆಯದ ಶಿಕ್ಷಣವು ಹೆಣ್ಮಕ್ಕಳ ಶಿಕ್ಷಣದ ಮಹತ್ವದ ಬಗ್ಗೆ ಅರಿವನ್ನು ಮೂಡಿಸುವುದು.
3. ಮಕ್ಕಳ ಹಕ್ಕುಗಳು ಮತ್ತು ರಕ್ಷಕರ ಜವಾಬ್ದಾರಿಗಳ ಬಗ್ಗೆ ಮಾಹಿತಿ ರಕ್ಷಕರಿಗೆ ಸಿಗಬೇಕು.

4. ಪ್ರತೀ ಹಾದಿಗಳಲ್ಲಿಯೂ ಶಿಕ್ಷಣದ ಮಹತ್ವದ ಬಗ್ಗೆ ಭಿತ್ತಿ ಚಿತ್ರಗಳು, ಪೋಸ್ಟರ್‌ಗಳನ್ನು ಹಂಚಬೇಕು.
5. ಮನೆಯಲ್ಲಿನ ಉತ್ತಮ ಹವ್ಯಾಸಗಳು, ಸಮಯದ ವೇಳಾಪಟ್ಟಿ, ಕೈತೋಟ ಇತ್ಯಾದಿಗಳ ಬಗ್ಗೆ ಮಕ್ಕಳಿಗೆ, ರಕ್ಷಕರಿಗೆ ಮಾಹಿತಿ ನೀಡಬೇಕು.
6. ಬ್ರಾಹ್ಮೀ ಮುಹೂರ್ತದ ಕಲ್ಪನೆ/ಸೂರ್ಯ ನಮಸ್ಕಾರದ ಮಾಹಿತಿಯನ್ನು ಸಮುದಾಯದಲ್ಲಿ ನೀಡಬೇಕು. ಕೊರಗರು ಸೂರ್ಯನ ಆರಾಧಕರಾಗಿದ್ದರಿಂದ ಈ ನಂಬಿಕೆಯನ್ನು ಸಮುದಾಯದಲ್ಲಿ ಪುನಃ ಬೆಳೆಸಬೇಕು.
7. ಕುಲಕಸುಬಿಗೆ ಮುಂದೆ ಬರಬಹುದಾದ ತೊಂದರೆಗಳ ಬಗ್ಗೆ ಮಾಹಿತಿ ನೀಡುವುದರ ಜೊತೆಗೆ ಅದಕ್ಕೆ ಹೊಸತನ ನೀಡುವ ತರಬೇತಿಯ ಬಗ್ಗೆ ಸರಕಾರದೊಂದಿಗೆ/ಸಮುದಯದೊಂದಿಗೆ ಮಾತುಕತೆಯೊಂದಿರಬೇಕು.
8. ಜೀವನದ ಬಗ್ಗೆ ಅವರನ್ನು ಕುತೂಹಲಿಗಾರರನ್ನಾಗಿ ಮಾಡಬೇಕು.
9. ಅಸ್ಪೃಶ್ಯತೆ, ಅಜಲ್‌ನಂತಹ ವಿಷಯಗಳ ಬಗ್ಗೆ ಸಮಾಜದ ಪ್ರಭಾವಿ ವ್ಯಕ್ತಿಗಳೊಂದಿಗೆ (ಅಧಿಕಾರಿ ವರ್ಗ, ರಾಜಕಾರಣಿಗಳು, ಬುದ್ಧಿ ಜೀವಿಗಳು) ಸಂವಾದವನ್ನು ಇಟ್ಟುಕೊಳ್ಳುವುದು.
10. ಅನನ್ಯತೆಯನ್ನು ಬೆಳೆಸುವ ಹಬ್ಬಗಳನ್ನು ಎಲ್ಲ ಕೊರಗರನ್ನು ಒಂದುಗೂಡಿ ಆಚರಿಸುವಂತೆ ಮಾಡುವುದು.
11. ಕೊರಗ ಸ್ವಂತಿಕೆ ಇರುವ ಹಬ್ಬಗಳಲ್ಲಿ (ಕೊರಗರಿಂದಲೇ ಆಚರಿಸಲ್ಪಡುವ) ಮತ್ತು ಕುಟುಂಬ ಕಾರ್ಯಕ್ರಮಗಳಲ್ಲಿ ಡೋಲು, ಕೊಳಲಿನಂತಹ ಸಾಂಸ್ಕೃತಿಕ ಕಲೆಗಳನ್ನು ಕಡ್ಡಾಯಗೊಳಿಸುವುದು.
12. ಸಮುದಾಯದಲ್ಲಿ ಸಾಮಾನ್ಯವಾಗಿರುವ ಶಿಕ್ಷಣ–ಹರೆಯ–ಮದುವೆ ಎಂಬ ಕಲ್ಪನೆಯನ್ನು ಬದಲಿಸಿ ಶಿಕ್ಷಣ–ಹರೆಯ–ಶಿಕ್ಷಣ ಎಂಬ ಕಲ್ಪನೆಯತ್ತ ಸಮುದಾಯಕ್ಕೆ ಅರಿವು ಮೂಡಿಸಬೇಕು.
13. ಸಮುದಾಯದ ಕಲೆ, ಕೌಶಲ್ಯ ಮತ್ತು ಭಾಷೆಯನ್ನು ಸಮುದಾಯದ ಅನನ್ಯತೆಗಾಗಿ ಉಳಿಸಿಕೊಳ್ಳುವ ಪ್ರಯತ್ನವನ್ನು ಸಮುದಾಯದಲ್ಲಿ ಮಾಡಬೇಕು. ಈ ಬಗ್ಗೆ ಅಭಿಯಾನವನ್ನೇ ಮಾಡಬೇಕು. ಉಳಿದ ವಿಷಯಗಳಿಗೆ ಕೊಡುವಷ್ಟೇ ಮಹತ್ವವನ್ನು ಈ ವಿಷಯಗಳಿಗೆ ನೀಡಬೇಕು.
14. ಆಶ್ರಮ ಶಾಲೆಯನ್ನು ಪೂರ್ಣವಾಗಿ ಬಳಸುವ ಸಲುವಾಗಿ ಹೆಚ್ಚು ಹೆಚ್ಚು ಕೊರಗ ಮಕ್ಕಳನ್ನು ದಾಖಲಾತಿ ಮಾಡಿಸಬೇಕು. ಆಶ್ರಮ ಶಾಲೆಗಳಲ್ಲಿ ಕಲಿಯುವುದರಿಂದ ಮಕ್ಕಳ ಕಲಿಕಾ ಸಾಮರ್ಥ್ಯವೂ ಹೆಚ್ಚುತ್ತದೆ. ಇಲ್ಲಿ ಕಲಿಯುವ ಮಕ್ಕಳಿಗೆ/ಕುಟುಂಬಗಳಿಗೆ ವಿಶೇಷ ಧನಸಹಾಯ ನೀಡುವಂತೆ ವಕಾಲತು ನಡೆಸಬೇಕು.
15. ಶಿಕ್ಷಣ ಕೆಲಸಕ್ಕಲ್ಲ ಅರಿವಿಗೆ ಎಂಬ ರೀತಿಯಲ್ಲಿ ಸಮುದಾಯಕ್ಕೆ ಶಿಕ್ಷಣದ ಮಹತ್ವವನ್ನು ತಿಳಿಸಬೇಕು.

16. ತಮ್ಮ ಹೆಸರುಗಳ ಮುಂದೆ ಕೊರಗ ಎಂಬ ಪದವನ್ನು ಬಳಸುವ ಮೂಲಕ ಸಮುದಾಯದ ಹಿರಿಮೆಯನ್ನು ವ್ಯಕ್ತಪಡಿಸಬೇಕು. ಇದು ಮಕ್ಕಳಲ್ಲಿರುವ ಕೀಳರಿಮೆಯನ್ನು ಕಡಿಮೆ ಮಾಡುತ್ತದೆ.
17. ಎಸ್.ಡಿ.ಎಂ.ಸಿ.ಯಲ್ಲಿ ಭಾಗವಹಿಸುವ ಮಹತ್ವವನ್ನು ಉದ್ದೇಶವನ್ನು ಸಮುದಾಯದಲ್ಲಿ ರಕ್ಷಕರಲ್ಲಿ ತಿಳಿಸಬೇಕು.
18. ಕೈಪಿಡಿಗಳನ್ನು ರಚಿಸುವುದು.
    ಅ. ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಗಳ ಬಗ್ಗೆ ಶಿಕ್ಷಕರಿಗೆ
    ಆ. ಸಮಾಜಕ್ಕೆ ಕೊರಗರ ಕೊಡುಗೆಗಳು ಎಂಬುವುದರಲ್ಲಿ ಸಮುದಾಯದ ಕಲೆ, ನೃತ್ಯ, ಸಂಗೀತ, ಔಷಧಿಯ ಜ್ಞಾನ, ಕೌಶಲ್ಯಗಳನ್ನು ತಿಳಿಸುತ್ತಾ ಶಾಲೆಗಳಿಗೆ
    ಇ. ಸಮುದಾಯದ ಹಿರಿಯರಿಂದ ಸಂಗ್ರಹಿತವಾದ, ಸಮುದಾಯದ ಹಿರಿಮೆಯನ್ನು ಸಾರುವ ಕಥೆಗಳು ಸಾರಸ್ಯಗಳ ಬಗ್ಗೆ ಸಮುದಾಯದ ಮಕ್ಕಳಿಗೆ ಮತ್ತು ಶಾಲೆಗೆ
    ಈ. ಸರಳೀಕರಿಸಿದ ಶಾಲಾ ಮಾಸಿಕ ಯೋಜನೆಗಳನ್ನೊಳಗೊಂಡ ಕೈಪಿಡಿ ಸಮುದಾಯದ ರಕ್ಷಕರಿಗೆ.
19. ಶಾಲಾ ಮಹತ್ವ, ಸಮುದಾಯದಲ್ಲಿ ಶಿಕ್ಷಣದ ಬಗ್ಗೆ ಅಭಿಯಾನ, ಬೀದಿನಾಟಕಗಳು, ಮಾಧ್ಯಮಗಳ ಮೂಲಕ ಸಮುದಾಯದಲ್ಲಿ ಸಂವೇದನೆಯನ್ನು ತರಬೇಕು. ಇದರಲ್ಲಿ ಶಿಕ್ಷಣಕ್ಕೆ ಅಡ್ಡಿಯಾಗುವ ನಿಯಮಗಳು, ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳ ಬಗ್ಗೆ ಸೂಕ್ಷ್ಮವಾಗಿ ತಿಳಿಸಬೇಕು.
20. ಗುಂಪಿಗೊಂದು ಅನೌಪಚಾರಿಕ ಶಾಲೆ ಆಶಯವನ್ನು ಹಾಡಿಗಳಲ್ಲಿ ಜಾರಿಗೆ ತರಬೇಕು. ಸಮುದಾಯದ ಸಾಕ್ಷರ ಗುಂಪಿಗೆ ಈ ಬಗ್ಗೆ ತರಬೇತಿ ನೀಡಿ ಅವರ ಮೂಲಕ ವಿಶೇಷ ತರಗತಿಗಳು ಸಮುದಾಯದ ಮಕ್ಕಳಿಗೆ ಸಿಗಬೇಕು. ಇವರಿಗೆ ತರಬೇತಿ ನೀಡಲು ಬಿ.ಆರ್.ಸಿ.ಯ ಮೂಲಕ ವಕಾಲತು ನಡೆಸಬೇಕು.
21. ಮುಂದೆ ಭೂಮಿಗಾಗಿ ಅರ್ಜಿಯನ್ನು ಹಾಕುವಾಗ ಇತರ ಸಮುದಾಯದ ಮನೆಗಳ ನಡುವೆ ಭೂಮಿಯನ್ನು ಕೇಳಬೇಕು. ಕೊರಗರ ಕೇರಿ ಎಂಬ ಆಶಯವು ಬದಲಾಗಬೇಕು, ಯಾಕೆಂದರೆ ಇದು ಅಸ್ಪೃಶ್ಯತೆಯನ್ನು ಕೀಳರಿಮೆಯನ್ನು ಹೆಚ್ಚಿಸುವುದು (ಅಂದರೆ ಪ್ರತ್ಯೇಕವಾಗಿ ಪುನರ್ವಸತಿ ಬೇಡ).
22. ಪ್ರತೀ ಹಾಡಿಗಳಲ್ಲಿ ಮಕ್ಕಳ ಸಂಘಟನೆ ಕಡ್ಡಾಯವಾಗಿ ರಚಿತವಾಗಬೇಕು. ಇದನ್ನು ಸಂಘಟನೆ ಸಂಯೋಜಿಸಬೇಕು ಮತ್ತು ಸ್ಥಳೀಯಾಡಳಿತ ಅನುದಾನವನ್ನು ನೀಡಬೇಕು, ಕೊರಗ ಮಕ್ಕಳ ಪೂರ್ಣ ಪ್ರಮಾಣದ ಪ್ರತಿಭೆ ಅನಾವರಣಗೊಳ್ಳಲು ಸಹಾಯವಾಗುವಂತೆ ಕಟ್ಟಡ, ಗ್ರಂಥಾಲಯ, ಪರಿಕರಗಳನ್ನು ಸರಕಾರ ನೀಡಬೆಕು.

ಇಲ್ಲಿ ಬೆಳಕಿಗೆ ಬಂದ (ಮಕ್ಕಳ ಶಿಬಿರದ ಮೂಲಕ) ಪ್ರತಿಭೆಗಳನ್ನು ವಲಯ, ತಾಲೂಕು, ಜಿಲ್ಲಾ ಮಟ್ಟದಲ್ಲಿ ಕಲಾಸ್ಪರ್ಧೆಗಳನ್ನಿಟ್ಟು ಗುರುತಿಸಬೇಕು. ಮತ್ತು ಈ ಪ್ರತಿಭೆಗಳಿಗೆ ಯೋಗ್ಯವಾದ ವೃತ್ತಿಪರ ತರಬೇತು ಕೋರ್ಸುಗಳು ಲಭಿಸುವಂತೆ ಮಾಡಬೇಕು. ಉದಾ: ಚಿತ್ರಗಾರಿಕೆಯ ಹುಡುಗನಿಗೆ ಚಿತ್ರಗಾರಿಕೆಯ

ಕೋರ್ಸು ಇತ್ಯಾದಿ. ಇಲ್ಲದಿದ್ದ ಪಕ್ಷದಲ್ಲಿ ಪ್ರತಿಭೆಗಳು ಬೆಳಕಿಗೆ ಬರುವುದಿಲ್ಲ. ಈ ಬಗ್ಗೆ ಸಂಘಟನೆ ನಿರ್ಣಯಾತ್ಮಕವಾಗಿ ಆಲೋಚಿಸಬೇಕು. ಮಕ್ಕಳ ಶಿಬಿರದಲ್ಲಿ ಮಕ್ಕಳ ಮೂಲಕ ಈ ಕೆಳಗಿನ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಬಹುದು.

1. ಮಕ್ಕಳೊಂದಿಗೆ ಮುಕ್ತವಾದ ಚರ್ಚೆ
2. ಮಕ್ಕಳಲ್ಲಿರುವ ಪ್ರತಿಭೆಗಳಿಗೆ ವೇದಿಕೆ, ಕಲಾಸ್ಪರ್ಧೆಗಳಿಗೆ ಅವಕಾಶ.
3. ಶಿಕ್ಷಣ ಸಮಸ್ಯೆಗಳ ಬಗ್ಗೆ ಚರ್ಚೆ
4. ಆಟೋಟ ಮತ್ತು ಕ್ರೀಡಾಸಕ್ತಿಯನ್ನು ಬೆಳೆಸುವುದು.
5. ಶಿಕ್ಷಕ ರಕ್ಷಕರೊಂದಿಗೆ ಸಂವಾದ
6. ಸಮುದಾಯದ ಸಮಸ್ಯೆಗಳನ್ನು ಪಟ್ಟಿಮಾಡಿ ಪರಿಹಾರವನ್ನು ಮಕ್ಕಳೇ ಹುಡುಕುವುದು.
7. ಕುಲಕಸುಬಿಗೆ ಹೊಸತನದ ತರಭೇತಿ
8. ಕಲೆ, ಸಂಸ್ಕೃತಿ, ಕೌಶಲ್ಯಗಳನ್ನು ಉಳಿಸಲು ಹಾಡು, ನೃತ್ಯದ ತಂಡ ರಚನೆ.
9. ಕಥೆ, ಕವಿತೆ, ನಾಟಕ, ಇತ್ಯಾದಿಗಳ ಮೂಲಕ ಕಲಿಕಾಸಕ್ತಿ
10. ಹದಿಹರೆಯದ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನು ನೀಡುವುದು.

ಈ ಮೇಲಿನ ಸಲಹೆಗಳನ್ನು ಸಂಘಟನೆ ಸಮುದಾಯದಲ್ಲಿ ಅನುಷ್ಠಾನಗೊಳ್ಳುವಂತೆ ನೋಡಬೇಕು ಹಾಗಾದರೆ ಸಮುದಾಯದಲ್ಲಿ ಶಿಕ್ಷಣದ ಮೂಲಕ ವೈಚಾರಿಕ ಪ್ರಬುದ್ಧತೆ ಸಾಧ್ಯವಾಗುತ್ತದೆ.

# ಅನುಬಂಧ 1.

## ಪ್ರಶ್ನಾವಳಿ/ಅನುಸೂಚಿ

ವಿಷಯ: "ಕೊರಗರಲ್ಲಿ ಶೈಕ್ಷಣಿಕ ಚಲನೆ, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಒಂದು ಅಧ್ಯಯನ"

ದಿನಾಂಕ: ________________ ಫೋನ್ ನಂಬ್ರ _____________

**I. ವೈಯಕ್ತಿಕ/ಸಾಮಾಜಿಕ–ಆರ್ಥಿಕ ಮಾಹಿತಿ**

1. ಕುಟುಂಬದ ಮುಖ್ಯಸ್ಥನ ಹೆಸರು ಮತ್ತು ವಿಳಾಸ
2. ವಯಸ್ಸು: ಅ) 20-30 ಆ) 31-40 ಇ) 41-50 ಈ) 50ಕ್ಕಿಂತ ಮೇಲೆ
3. ಶಿಕ್ಷಣ: ಅ) ಅನಕ್ಷರಸ್ಥ ಆ) 1-4ಇ) 5-7ಈ) 8-10
   ಉ) ಡಿಪ್ಲೊಮಾ ಊ) ಪಿಯುಸಿ ಋ) ಪದವಿ ಎ) ಸ್ನಾತಕೋತ್ತರ
4. ಉದ್ಯೋಗ ಅ) ಕೂಲಿ ಕಾರ್ಮಿಕ ಆ) ಸ್ವಂತ ಕೃಷಿ ಇ) ಸ್ವಂತ ಉದ್ಯೋಗ
   ಈ) ಖಾಸಗಿ ಉದ್ಯೋಗಿ ಉ) ಸರಕಾರಿ ಉದ್ಯೋಗಿ
5. ವಾರ್ಷಿಕ ವರಮಾನ: ಅ) 20000-30000 ಆ) 30000-40000
   ಇ) 40000-50000 ಈ) 50000 ಕ್ಕಿಂತ ಹೆಚ್ಚು
6. ಕುಟುಂಬದಲ್ಲಿ ವಾಸಿಸುವ ಜನರು: ಅ) 2-4 ಆ) 5-7ಇ) 8-10
   ಈ) 10ಕ್ಕಿಂತ ಹೆಚ್ಚು

7. ಕುಟುಂಬದ ಇತರ ವಿವರಗಳು:

| ಕ್ರಮ ಸಂಖ್ಯೆ | ಯಜಮಾನ ನೊಂದಿಗಿರುವ ಸಂಬಂಧ | ಪ್ರಾಯ | ಶಿಕ್ಷಣ | ಮಾಧ್ಯಮ ಕನ್ನಡ/ ಇಂಗ್ಲೀಷ್ | ಮುಗಿದಿದೆ/ ಮುಂದುವರಿ ಯುತ್ತದೆ | ಉದ್ಯೋಗ | ಆದಾಯ |
|---|---|---|---|---|---|---|---|
| 1. | | | | | | | |
| 2. | | | | | | | |
| 3. | | | | | | | |
| 4. | | | | | | | |
| 5. | | | | | | | |
| 6 | | | | | | | |

**II. ಶೈಕ್ಷಣಿಕ ಮಾಹಿತಿ:**

8. ನಿಮ್ಮ ಹೆತ್ತವರು ವಿದ್ಯಾವಂತರಾಗಿದ್ದರೆ?

ತಂದೆ ಹೌದು ಇಲ್ಲ

ತಾಯಿ ಹೌದು ಇಲ್ಲ

9. ಹೌದಾದರೆ ಅವರ ಶಿಕ್ಷಣ ಮಟ್ಟ ಯಾವುದಾಗಿತ್ತು?

ತಂದೆ ಅನಕ್ಷರಸ್ಥ ಪ್ರಾಥಮಿಕ ಪ್ರೌಢ ಪಿಯುಸಿಪದವಿ

ತಾಯಿ ಅನಕ್ಷರಸ್ಥೆ ಪ್ರಾಥಮಿಕ ಪ್ರೌಢ ಪಿಯುಸಿಪದವಿ

10. ನಿಮ್ಮ ಮಕ್ಕಳು ಶಿಕ್ಷಣ ಪಡೆಯುತ್ತಿರುವ ಸಂದರ್ಭ ಸರಕಾರದಿಂದ ಸೌಲಭ್ಯಗಳನ್ನು ಪಡೆದಿದ್ದಾರೆಯೇ?

ಅ. ಹೌದು ಆ. ಇಲ್ಲ

11. ಹೌದಾದರೆ ಯಾವುದೆಂದು ತಿಳಿಸಿ:

ಅ.ವಿದ್ಯಾರ್ಥಿವೇತನ ಆ.ಫ್ರಿಶಿಫ್ ಇ.ಪುಸ್ತಕ ಈ.ಸಮವಸ್ತ್ರ ಉ.ವಸತಿ (ಹಾಸ್ಟೆಲ್)

ಊ.ಬ್ಯಾಂಕ್ ಸಾಲ ಋ.ಇತರ ಯಾವುದಾದರೂ (ತಿಳಿಸಿ)

12. ನಿಮ್ಮ ಮಕ್ಕಳು ಮುಂದೆ ತಮ್ಮ ಶಿಕ್ಷಣವನ್ನು ಮುಂದುವರಿಸಬೇಕೆಂದು ಹೇಳುತ್ತೀರಾ?

ಅ. ಹೌದು ಆ. ಇಲ್ಲ

13. ಹೌದಾದರೆ ಕಾರಣ ನೀಡಿ

14. ಮಕ್ಕಳು ಶಿಕ್ಷಣ ಪಡೆದುದರಿಂದ ಪ್ರಸ್ತುತ ನಿಮ್ಮ ಜೀವನದಲ್ಲಿ ಏನಾದರೂ ಬದಲಾವಣೆಗಲಾಗಿವೆಯೇ?

ಅ. ಹೌದು ಆ.ಇಲ್ಲ

15. ಹೌದದರೆ ಏನೆಲ್ಲಾ ಬದಲಾವಣೆಗಳಾಗಿವೇ?

16. ವಿದ್ಯೆ ಪಡೆದ ಮಕ್ಕಳು ಮುಂದೆ ಯಾವ ಉದ್ಯೋಗ ಕೈಗೊಳ್ಳಬೇಕೆಂದು ಇಚ್ಚಿಸುತ್ತೀರಿ/ ಇಚ್ಚಿಸುತ್ತಾರೆ

ಅ.ಸರಕಾರಿ ವೃತ್ತಿ ಪರ ಆ.ಖಾಸಗಿ ವೃತ್ತಿಪರ

ಇ.ಸ್ವಂತ ಉದ್ಯೊಗ ಈ.ಇತರ ಯಾವುದಾದರೂ ತಿಳಿಸಿ

17. ಮೀಸಲಾತಿ ಸೌಲಭ್ಯದಿಂದಾಗಿ ನೀವು ಪಡೆದ ಸೌಲಭ್ಯಗಳಾವುವು?

ಅ.ಶಿಕ್ಷಣಆ.ಉದ್ಯೋಗ ಇ.ರಾಜಕೀಯ ಸ್ಥಾನ ಈ. ಬ್ಯಾಂಕ್ ಸೌಲಭ್ಯಗಳು

ಇತರ ಯಾವುದಾದರೂ (ತಿಳಿಸಿ)

18. ನೀವು ಎಸ್.ಡಿ.ಎಂ.ಸಿ.ಯ ಸದಸ್ಯರಾಗಿದ್ದೀರಾ?

ಅ. ಹೌದು ಆ. ಇಲ್ಲ

19. ಸದಸ್ಯರಾಗಿದ್ದರೆ ಎಸ್.ಡಿ.ಎಂ.ಸಿ. ಸಭೆಗಳಲ್ಲಿ ಭಾಗವಹಿಸಿದ್ದೀರಾ?

ಅ. ಹೌದು ಆ. ಇಲ್ಲ

20. ಭಾಗವಹಿಸಿದ್ದರೆ ಅದರಿಂದ ನಿಮಗೆ ಯಾವ ರೀತಿಯ ಶೈಕ್ಷಣಿಕ ಪ್ರಯೋಜನಗಳಾಗಿವೆ? ತಿಳಿಸಿ

# ಅನುಬಂಧ – 2

## ಕೊರಗ

ಸುಡುವ ಬಿಸಿಲಿನ ಬೇಗೆಯುರಿ, ತೊಗಲೆಲ್ಲ
ಸುಟ್ಟು ಸೀಕರಿ ಹೋದರೂ ಬಣ್ಣಕೆಡದಂಥ
ಕರಿಮಯ್ಯ ಹಿರಿಜೀವ/ಭೋರೆಂಬ ಜಡಿಮಳೆಗೆ
ಅಡಿಯಿಂದ ಮುಡಿವರೆಗು ನೀರು ಧಾರಾಕಾರ
ಸುರಿಯುತ್ತಿದ್ದರು ಶೀತನಿರ್ಲಿಪ್ತ ಸಮಭಾವ!
ಮೈನಾನ ಮುಚ್ಚಲಿಕೆ, ನಡನಡುಗಿಸುವ ಚಳಿಗೆ
ಹರಕು ಚಿಂದಿಯ ಹೊದಿಕೆ – ಏನಿಲ್ಲವೀತನಿಗೆ!

ಪ್ರಕೃತಿಯ ಪ್ರಕೋಪಕ್ಕೆ ತಾಪಕ್ಕೆ ಶಾಪಕ್ಕೆ
ಎಲ್ಲದಕು ಮೂಕಬಲಿಯಾಗಿಯೇ ಬಾಳ್ದವನು!
ಕಾಟಿಕಾಡಾನೆಗಳ ತೊತ್ತಳೆದ ತುಳಿತಕ್ಕೆ
ಹಗಲಿರುಳು ತಲೆಯೊಡ್ಡಿ ಬೆಟ್ಟದಡಿಯಲಿ ಚಾಚಿ
ಬಿದ್ದಿರುವ ಹೆಬ್ಬಂಡೆಯಂತಿಹನು ಬುರುಡೆಗವಿ
ಒಳಮುದುಡಿ ಮಿದುಳೋ ಮಹಾಮೌನಿ ಇರಲೊಂದು
ಮನೆಯಿಲ್ಲ, ಮಠವಿಲ್ಲ, ಗುರಿ ತೋರ್ಪ ಗುರುವಿಲ್ಲ,
ಸುಖದುಃಖದರಿವಿಲ್ಲ, ನಲ್ಮೆಬಲ್ಮೆಗಳಿಲ್ಲ;
ಇಲ್ಲವೆಂಬುದೆ ಇವನ ಬದುಕು ಭಾಗ್ಯಗಳೆಲ್ಲ!
ಏನಾದರೂ ತನಗೆ, ನೋವಾದರೂ ತನುಗೆ
ಏಂತಾದರೂ ಮನಕೆ, – ಯಾವುದಕು ಇವೆ ಕೊರಗ

ಕವಿ ಕಯ್ಯಾರ ಕಿಂಞಣ್ಣರೈ ಅವರ 'ಕೊರಗ' ಎಂಬ ಕವನದ ಕೆಲವು ಸಾಲುಗಳಿವು, ಕನ್ನಡ ಕರಾವಳಿಯಲ್ಲಿ ಮತ್ತು ಇತರ ಪ್ರದೇಶಗಳಲ್ಲಿರುವ ಕೊರಗರೆಂಬ ಹಿಂದುಳಿದ ಗಿರಿಜನ ಸಮಾಜವೊಂದರ ಧಾರುಣ ಚಿತ್ರವನ್ನು ಕವಿಗಳು ಮನಮಿಡಿಯುವಂತೆ ನೀಡಿದ್ದಾರೆ.

(ಸಂಗ್ರಹ– ಅಮೃತ ಸೋಮೇಶ್ವರರ 'ಕೊರಗರು' ಎಂಬ ಕೃತಿಯಿಂದ)

# ಅನುಬಂಧ – 3

## ಪದಕೋಶ

| | | |
|---|---|---|
| ಅಡಾರ್ಲು | – | ಮರಗೆಲಸದವರು |
| ಅಡೆ | – | ಹುಡುಕು |
| ಅನ್ನ | – | ನನ್ನ |
| ಅಪ್ಪೆ | – | ತಾಯಿ |
| ಅದ್ದಿ | – | ಅವಳು |
| ಅರಿ | – | ಅಳುವುದು |
| ಉಯ್ಯಾಲಿ | – | ತಲೆಬಾಚು |
| ಎನ್ನಿ | – | ಎತ್ತಿಕೋ |
| ಕಡ್ಡಿ | – | ಡೋಲು |
| ಕಮಡಿ | – | ಕದಿಯುವುದು |
| ಕಮ್ಮಿ | – | ಮಲಗಿಕೊಳ್ಳಿ |
| ಕೋನಿ | – | ನರ್ತಿಸು |
| ಕೊರತಿ | – | ಹೆಂಡತಿ |
| ಕೋರಿ | – | ಕಲ್ಲು |
| ಗರ್ಬ | – | ಕಬ್ಬಿಣ |
| ತೆರಪಿ | – | ಉಜ್ಜು |
| ಮಾಮೆಲು | – | ಮಾವ |
| ಸೋರೆ | – | ಸೋರೆಕಾಯಿ |
| ಹಯಡಿ | – | ಅಡಗಿಕೋ |
| ಹೊಟ್ಟ | – | ಸಮಯ |

## ಭಾವಚಿತ್ರಗಳು



ಚಿತ್ರ 1:
ಕೇಂದ್ರೀಯ ಮಾದರಿ ವಸತಿ ಶಾಲೆ ಮಧ್ಯ, ಶ್ರೀನಿವಾಸ ನಗರ, (ಸುರತ್ಕಲ್)
ಇದರ "ವಿದ್ಯಾರ್ಥಿ ನಿಲಯ"



ಚಿತ್ರ 2:
ಕೇಂದ್ರೀಯ ಮಾದರಿ ವಸತಿ ಶಾಲೆಯ ಮಕ್ಕಳು ದೂರದರ್ಶನದ ಮೂಲಕ ಶೈಕ್ಷಣಿಕ ಕಾರ್ಯಕ್ರಮದ ವೀಕ್ಷಣೆ



ಚಿತ್ರ 3:
ಬೇಸಿಗೆ ಶಿಬಿರದಲ್ಲಿ ಭಾಗವಹಿಸಿದ ಕೊರಗ ಪೋಷಕರು ಮತ್ತು ಮಕ್ಕಳು



ಚಿತ್ರ 4:
ಬೇಸಿಗೆ ಶಿಬಿರದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಕೊರಗ ಪಾಲಕರು ಮತ್ತು ಮಕ್ಕಳು



ಚಿತ್ರ 5:
ಮಕ್ಕಳು ಸಾಂಸ್ಕೃತಿಕ ಕೂಟದಲ್ಲಿ ಕೊರಗ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರು



ಚಿತ್ರ 6:
ಬೇಸಿಗೆ ಶಿಬಿರದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಕೊರಗ ವಿದ್ಯಾರ್ಥಿನಿಯರು



ಚಿತ್ರ 7:
ಬೇಸಿಗೆ ಶಿಬಿರದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಕೊರಗ ವಿದ್ಯಾರ್ಥಿಗಳು



ಚಿತ್ರ 8:
ಕೇಂದ್ರೀಯ ಮಾದರಿ ವಸತಿ ಶಾಲೆಯ ಮಕ್ಕಳು ತರಗತಿಯಲ್ಲಿ ಪಾಠ ಕೇಳುತ್ತಿರುವುದು.



ಚಿತ್ರ 9:

ಸಮುದಾಯ ಜಾಗೃತಿ ಅಭಿಯಾನ–2011 ಪ್ರಾರ್ಥನೆಯಲ್ಲಿ ಕೊರಗ ಮಕ್ಕಳು



ಚಿತ್ರ 10:

ಕೊರಗ ಮಕ್ಕಳ ಜಾನಪದ ಸಾಂಸ್ಕೃತಿಕ ಕಾರ್ಯಕ್ರಮ

# ಗ್ರಂಥ ಸೂಚಿ


- ಅಮೃತ ಸೋಮೇಶ್ವರ, 1982, ***ಕೊರಗರು,*** ಬೆಂಗಳೂರು; ಐ.ಬಿ.ಎಚ್. ಪ್ರಕಾಶನ
- ಅಂಗಡಿ ಎಸ್.ಎಸ್., 2008, ***ಕರ್ನಾಟಕ ಬುಡಕಟ್ಟು ಬಾಷೆ,*** ಬೆಂಗಳೂರು, ಸೃಷ್ಟಿ ಪಬ್ಲಿಕೇಶನ್ಸ್.
- ಬಾಬು ಕೊರಗ ಪಾಂಗಳ, 2009 ***ಕೊರಗರ ಅಜಲು*** (ಒಂದು ವಿಶ್ಲೇಷಣೆ), ವಾಮಂಜುರು, ಸೈಂಟ್ ಜೋಸೆಫ್ ಪೇಪರ್ ವರ್ಕ್ಸ್
- ಬಿಳಿಮಲೆ ಪುರುಷೋತ್ತಮ 1993, ***ಕೊರಗರ ಸಂಸ್ಕೃತಿ,*** ಬೆಂಗಳೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಬೇವಿನ ಕಟ್ಟೆ, ಮಂಜುನಾಥ, 2007, ***ಆದಿವಾಸಿ,*** ಬೆಂಗಳೂರು, ಸಾಹಿತ್ಯ ನಂದನೆ
- ಭೈರಪ್ಪ ಕೆ. 2009, ***ಭಾರತದ ಸಮಾಜ ಪರಂಪರೆ ಮತ್ತು ಪರಿವರ್ತನೆ,*** ಬೆಂಗಳೂರು, ಸಪ್ನ ಬುಕ್ ಹೌಸ್
- ಬೈರೇಗೌಡ, ಎಂ. 2005, ***ಕಾಡು ಬಿಡಲೊಲ್ಲದವರು,*** ಬೆಂಗಳೂರು, ದಾಮಿನಿ ಸಾಹಿತ್ಯ
- ಚಂದ್ರ ಪೂಜಾರಿ, ಎಂ. 2007, ***ಸಂಶೋಧನೆ ಏನು? ಏಕೆ? ಹೇಗೆ?*** ಹಂಪಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
- ಚಂದ್ರ ಪೂಜಾರಿ, ಎಂ. 2008 ಸಂಶೋಧನ ಪ್ರಸ್ತಾವ, ಹಂಪಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
- ದೇವಜ ಗಂಗಾಧರ 2000, ***ಬುಡಕಟ್ಟು ಸಮಾಜ (ಹುಟ್ಟು ಸಾವಿನ ನಡುವೆ, ಹಂಪಿ)*** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
- ಕುಲಕರ್ಣಿ ಕೆ.ಜಿ. 2008, ***ಭಾರತದ ಪ್ರಚಲಿತ ಶೈಕ್ಷಣಿಕ ಸಮಸ್ಯೆಗಳು,*** ಗದಗ, ಶ್ರೀ ಖೇಶರಾಜ ಪಬ್ಲಿಕೇಶನ್ಸ್
- ಕೆ.ಜಿ. ಕುಲಕರ್ಣಿ 2008, ***ಶಿಕ್ಷಣದ ಆಧಾರಗಳು,*** ಗದಗ, ಪ್ರದೀಪ್ ಪ್ರಕಾಶನ
- ***ಕೊರಗ ಸಮುದಾಯದ ಸಮಗ್ರ ಅಭಿವೃದ್ಧಿಗಾಗಿ ಕ್ರಿಯಾ ಯೋಜನೆ (ವರದಿ) 2008-09***; ಕರ್ನಾಟಕ ಸರ್ಕಾರ; ಬೆಂಗಳೂರು.
- ಮಾಲಗತ್ತಿ ಅರವಿಂದ ಮತ್ತು ಒಡೆಯರ್ ಡಿ. ಹೆಗ್ಗಡೆ, 1991, ಕೊರಗ ಜನಾಂಗ–ವಿಶ್ಲೇಷಣಾತ್ಮಕ ಅಧ್ಯಯನ; ಮಂಗಳೂರು ದಕ್ಷಿಣ ಕನ್ನಡ, ಜಿಲ್ಲಾ ಪರಿಷತ್.
- ಪ್ರಭಾಕರ, ಎ.ಎಸ್. 2006, ***ಆದಿವಾಸಿ ಆಖ್ಯಾನ,*** ಹೊಸಪೇಟೆ, ಸಿದ್ದಾರ್ಥ ಪ್ರಕಾಶನ

- ರಮಾನಾಥ ಬಿ. ಮತ್ತು ಜೀವನ್‌ದಾಸ್, ಎ. 2006, ***ಸಾಮಾಜಿಕ ಸಂಶೋಧನಾ ವಿಧಾನಗಳು,*** ಉಡುಪಿ, ಶ್ರುತಿ ಪ್ರಕಾಶನ
- ರವೀಂದ್ರನಾಥ ಕೆ. 2008, ***ಅಧ್ಯಯನದ ವಿಧಿವಿಧಾನಗಳು,*** ಹಂಪಿ, ಪ್ರಸರಾಂಗ ಕನ್ನಡ ವಿಶ್ವವಿಧ್ಯಾಲಯ
- ಸಮಗ್ರ ಗ್ರಾಮೀಣ ಆಶ್ರಮ ಮತ್ತು ಕೊರಗಾಭಿವೃದ್ಧಿ ಸಂಘಗಳ ಒಕ್ಕೂಟ(ರಿ), 2008, ***ಕೊರಗ ಸಮುದಾಯದಲ್ಲಿ ಶಿಕ್ಷಣ ಒಂದು ಅಧ್ಯಯನ,*** ಉಡುಪಿ, ಮಾನವ ಅಭಿವೃದ್ಧಿ ಕೇಂದ್ರ.
- ಶಂಕರ್‌ರಾವ್ ಸಿ.ಎನ್. 2010, ***ಭಾರತೀಯ ಸಮಾಜ (ಸಂರಚನೆ ಮತ್ತು ಪರಿವರ್ತನೆ)*** ಮಂಗಳೂರು, ಜೈ ಭಾರತ್ ಪ್ರಕಾಶನ
- Rao Ravindranath. Y 2003, ***Tribal Social Tradition and Change*** a Study of Kadubis of South India. Mangalore, Mangala Publications.
- Shetty. Devadas, 2008, ***Tribal Social Working group-Action Aid***. Udupi, Samagra Grameena Ashrama.
- Vasudevan, C. 1998, ***Koragas The Forgotten Law***, ***The primitive Tribe Of Tulu Nadu***. Trichur, the Ethos.

